# ಶೂದ್ರ

ಬೆಲೆ : 3-00



ಈ ಸಂಚಿಕೆಯಲ್ಲಿ :

ಮುಕ್ತ ಚರ್ಚೆಗಾಗಿ '**ಶೂದ್ರ**' ತಿಂಗಳ ಪತ್ರಿಕೆ

ಸಂಚಿಕೆ : 5 ಮಾರ್ಚ್ 1988 ಸಂಪುಟ : 14

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ – ಆನಂದಮೂರ್ತಿ – ಟಿ. ಸಿ. ಮಹೇಶ್
ಉತ್ತನೂರು ರಾಜಮ್ಮ ವಿ. ಶೆಟ್ಟಿ

ಶೂದ್ರಕ್ಕೆ ಚಂದಾ ಕಳಿಸಿ. ಆಜೀವ ಚಂದಾ ಬಾಬ್ತು ಕಂತುಗಳಲ್ಲಿ ಕೊಡುವವರು ಸ್ವಲ್ಪ ಜಾಗ್ರತೆ ಕೊಟ್ಟರೆ ಒಳಿತು. ಚಂದಾದ ರೀತಿಯಲ್ಲಿ ನಾಲ್ಕೈದು ವರ್ಷಕೊಟ್ಟರೆ ನಿಜವಾಗಿಯೂ ತೊಂದರೆಯಾಗುತ್ತದೆ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾವನ್ನು ಎಂ. ಓ. ಮೂಲಕ ಕಳಿಸುವವರು ದಯವಿಟ್ಟು ಕೌಂಟರ್ ಭಾಗದಲ್ಲಿ ವಿಳಾಸ ಬರೆಯಿರಿ. ಲೇಖನ ಮತ್ತು ಕವನ ಕಳಿಸುವವರು 15 ಪೈಸೆಯ ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಕಳಿಸುವವರು 2 ರೂ. ಹೆಚ್ಚುವರಿ ತುಂಬಿ.

**ನೀವು ಕಳಿಸುವ ಚಂದಾ 'ಶೂದ್ರ'ದ ಬೆಳವಣಿಗೆಯ ಸಂಕೇತ.**

ಮುಖ ಪುಟದ ಕಲಾವಿದ : **ಹೆನ್ರಿಮೂರ್**

ವಾರ್ಷಿಕ ಚಂದಾ : 30 ರೂ. ಪುಸ್ತಕ ಭಂಡಾರಗಳಿಗೆ 35 ರೂ.
ಆಜೀವ ಚಂದಾ : 300 ರೂ. ಆರು ಕಂತುಗಳಲ್ಲಿ.

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು-560 029

**ಹಿರಿಯ ಸಮಾಜವಾದಿ ನಾಯಕ ಕರ್ಪೂರಿ ಠಾಕೂರ್‌ರವರ ನಿಧನಕ್ಕೆ 'ಶೂದ್ರ' ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ.**

# ರಾಷ್ಟ್ರೀಯತೆ: ಒಂದು ಮರುಚಿಂತನೆ

—ಕೆ. ವಿ. ತಿರುಮಲೇಶ್

ರಾಷ್ಟ್ರೀಯತೆಯೆನ್ನುವುದೊಂದು ಮನಸ್ಥಿತಿ; ಸಮೂಹ ಕಲ್ಯಾಣಕ್ಕೆ ಅಗತ್ಯವೆನಿಸುವ ಒಂದು ಧರ್ಮದ ಕುರಿತಾದ ಅರಿವು; ಅದು ವರ್ಣವನ್ನಾಗಲಿ ವಂಶವನ್ನಾಗಲಿ ಅವಲಂಬಿಸಿರದೆ, ಸಮಾನ ಚಿಂತನೆ ಹಾಗೂ ಉದ್ದೇಶಗಳನ್ನು ಅವಲಂಬಿಸಿರುತ್ತದೆ—ಎನ್ನುತ್ತಾನೆ ಇಟಲಿಯ ಕ್ರಾಂತಿಕಾರಿ ಜೂಸೆಪೆ ಮಜಿನಿ. ಹೀಗಿರುತ್ತ ರಾಷ್ಟ್ರೀಯತೆಯ ಕಲ್ಪನೆಯು ಕಾಲದಿಂದ ಕಾಲಕ್ಕೆ ಬದಲಾಗುವುದರಲ್ಲಿ ಆಶ್ಚರ್ಯವೇನಿಲ್ಲ: ರಾಷ್ಟ್ರಗಳು ಹುಟ್ಟುತ್ತವೆ, ಬೆಳೆಯುತ್ತವೆ ಹಾಗೂ ನಾಶವಾಗುತ್ತವೆ. ಪುರಾತನ ಕಾಲದಲ್ಲಿ ಭಾರತವೆಂಬ ರಾಷ್ಟ್ರೀಯ ಕಲ್ಪನೆಯೊಂದು ಇತ್ತೆ? ಇದ್ದರೆ ಅದರ ವ್ಯಾಪ್ತಿ ಇಂದು ನಾವು ಭಾರತವೆಂದು ಕರೆಯುವ ಅಥವ ಮಾನಸಿಕವಾಗಿ ಅರಿಯುವ ರಾಷ್ಟ್ರಕ್ಕೆ ಸರಿಸಮವಾಗಿತ್ತೆ? ಪಾಕಿಸ್ತಾನ, ಬಂಗ್ಲಾದೇಶ, ಭೂತಾನ, ನೇಪಾಳ, ಶ್ರೀಲಂಕ (ಬಹುಶಃ ಬರ್ಮಾದೇಶ ಕೂಡ) ಇಂದಿನ ಭಾರತದಿಂದ ಬೇರೆಯಾಗಿರುವುದು ಎಷ್ಟರ ಮಟ್ಟಿಗೆ ಸಮಂಜಸ? ಸಿಕ್ಕಿಮನ್ನು ಭಾರತದ ಗಣರಾಜ್ಯದಲ್ಲಿ ಸೇರಿಸಿಕೊಂಡುದು ಸರಿಯೆ ತಪ್ಪೆ? ಶ್ರೀಲಂಕವು ಎರಡು ರಾಷ್ಟ್ರಗಳಾಗಿ ಒಡೆಯುವುದರಿಂದ ಮಾತ್ರವೆ ಅಲ್ಲಿ ಸಮೂಹಕಲ್ಯಾಣ ಸಾಧ್ಯವೇ? ಭಾಷಾವಾರು ಪ್ರಾಂತ ರಚನೆಯಿಂದಾಗಿ ಭಾರತದ ರಾಷ್ಟ್ರೀಯತೆಗೆ ಒಳಿತಾಗಿದೆಯೇ, ಕೆಡುಕಾಗಿದೆಯೇ? ಭಾರತವು ಬ್ರಿಟಿಷರ ಆಡಳಿತಕ್ಕೆ ಒಳಗಾಗದೆ ಇರುತ್ತಿದ್ದರೆ ನಮಗೆ ರಾಷ್ಟ್ರೀಯ ಕಲ್ಪನೆ ಬರುವುದು ಸಾಧ್ಯವಿತ್ತೆ? ಖಾಲಿಸ್ತಾನದಿಂದ ಮಾತ್ರವೆ ಸಿಖ್ ಸಮಸ್ಯೆ ಬಗೆಹರಿಯುವುದೆ? ಮುಂದಿನ ಶತಮಾನದಲ್ಲಿ ಭಾರತದ ಭೂಪಟ ಇದೇ ರೀತಿ ಇರುತ್ತದೆಯೇ? ರಾಷ್ಟ್ರೀಯತೆಯ ಮಾತೆತ್ತಿದ ತಕ್ಷಣ ಇಂಥ ಹಲವಾರು ಪ್ರಶ್ನೆಗಳೇಳುತ್ತವೆ ಹಾಗೂ ಈ ಪ್ರಶ್ನೆಗಳಿಗೆ ಸುಲಭವಾದ ಉತ್ತರಗಳಿಲ್ಲವೆಂಬುದನ್ನು ಮನಗಾಣಬೇಕು.

ರಾಷ್ಟ್ರೀಯತೆಯೆನ್ನುವುದು ಪ್ರಧಾನವಾಗಿ ರಾಜಕೀಯವಾದ ಕಲ್ಪನೆ. ಆದರೆ ರಾಜಕೀಯವೊಂದೆ ಮನುಷ್ಯ ಸಮೂಹಗಳ ಸಾಮಾಜಿಕ ಹಾಗೂ ಭಾವನಾತ್ಮಕ ಬದುಕನ್ನು ನಿಯಂತ್ರಿಸುವುದಿಲ್ಲ. ಇತರ ಹಲವಾರು ಸತ್ಯಗಳನ್ನು ನಾವು ಗುರುತಿಸಿ

ಕೆ. ವಿ. ತಿರುಮಲೇಶ್, ರೀಡರ್, ಸಿ. ಐ. ಇ. ಎಫ್. ಎಲ್, ಹೈದರಾಬಾದ್-500007

ಕೊಳ್ಳಬೇಕಾಗುತ್ತದೆ. ದಕ್ಷಿಣ ಭಾರತದವನಾದ ನಾನು ಉತ್ತರ ಭಾರತವನ್ನು ಸುತ್ತುತ್ತ ಉಡುಪಿ ಹೋಟೆಲನ್ನು ಕಂಡು ಸಂತೋಷಗೊಳ್ಳಬಹುದು. ಹಾಗೆಯೆ ಉತ್ತರದವರು ಕನ್ಯಾಕುಮಾರಿಯಲ್ಲಿ ತಂದೂರಿ ರೋಟಿ ಸಿಗುವುದನ್ನು ಕಂಡು ಖುಷಿ ಪಡಬಹುದು. ದಾಡಿ ಬೆಳೆಸಿ ಬಹುಶಃ ಮುಸ್ಲಿಮನಂತೆ ಕಾಣಿಸುತ್ತಿರುವ ನನ್ನನ್ನು ನೋಡಿ ಗುರುತು ಪರಿಚಯವಿರದ ಹೈದರಾಬಾದಿ ಮುಸ್ಲಿಮರು ಅದೊಂದೆ ಕಾರಣಕ್ಕೆ ಬಲಗೈಯ ಬೆರಳುಗಳಿಂದ ಸಲಾಮ್ ಮಾಡುವುದುಂಟು. ಇಂಗ್ಲೆಂಡಿನಲ್ಲಿದ್ದಾಗ ನಮ್ಮ ವಸತಿ ಗೃಹದಲ್ಲಿ ವಾಸವಾಗಿದ್ದ ಆಫ್ರಿಕನ್, ಫಿಲಿಪಿನೊ ಹಾಗೂ ಪಾಕಿಸ್ತಾನಿಗಳಲ್ಲಿ ನನಗೆ ಬಹಳ ಹತ್ತಿರವಾಗಿದ್ದವರು ಪಾಕಿಸ್ತಾನಿಗಳೇ. ಪ್ರತಿಯೊಬ್ಬ ವ್ಯಕ್ತಿಯನ್ನು ತೆಗೆದು ನೋಡಿದರೆ ಆತ ಹಲವು ವರ್ತುಲಗಳಲ್ಲಿ ಏಕಕಾಲದಲ್ಲೇ ಬಂತೆ ವರ್ತಿಸು ವುದನ್ನು ಕಾಣುತ್ತೇವೆ. ಭಾಷೆಯಿಂದ, ಜಾತಿಯಿಂದ, ವರ್ಣದಿಂದ, ವಂಶದಿಂದ, ಪ್ರಾದೇಶಿಕತೆಯಿಂದ, ವೃತ್ತಿಯಿಂದ, ರಾಜಕೀಯ ಸಿದ್ಧಾಂತದಿಂದ, ಆರ್ಥಿಕ ಪರಿಸ್ಥಿತಿ ಯಿಂದ, ಮದುವೆ ಅಥವ ಪ್ರೀತಿಯ ಮೂಲಕ ಉಂಟಾಗುವ ಸಂಬಂಧಗಳಿಂದ ಮನುಷ್ಯರು ಬೇರೆ ಬೇರೆ ಗುಂಪುಗಳಿಗೆ ಸೇರಿಕೊಂಡಿರಬಹುದು. ಈ ಸಂಗತಿಗಳು ಕೆಲವೊಮ್ಮೆ ಒಂದಕ್ಕೊಂದು ಸಮನಾಗಿ ಯಾವ ಘರ್ಷಣೆಯನ್ನು ಕೊಡದಿರಬಹುದು. ಉದಾಹರಣೆಗೆ ಮತೀಯ ರಾಷ್ಟ್ರಗಳಲ್ಲಿ ಮತ ಮತ್ತು ರಾಷ್ಟ್ರೀಯತೆಯ ನಡುವೆ ಘರ್ಷಣೆ ನಡೆಯುವ ಪ್ರಸಂಗವಿಲ್ಲ. ಆದರೆ ಹೆಚ್ಚಾಗಿ ಇಂಥ ಸಮಂಜಸ ಗುಂಪುಗಳ ನಡುವೆ ಇರುವುದೇ ಇಲ್ಲ.

ಬದುಕಿನ ಉಪಾಧಿಗಳಿಗೆ ಬದ್ಧನಾಗಿದ್ದಂತೆ ವ್ಯಕ್ತಿಯ ಮೇಲಿನ ಒತ್ತಡವೂ ಹೆಚ್ಚು. ಯಾಕೆಂದರೆ ಪ್ರತಿಯೊಂದು ಉಪಾಧಿಯೂ ಅವನಿಂದ ಸಂಪೂರ್ಣ ನಿಷ್ಠೆ ಯನ್ನು ಬಯಸುತ್ತದೆ. ಉದಾಹರಣೆಗೆ ಮತ ಮತ್ತು ರಾಷ್ಟ್ರೀಯತೆಯ ನಡುವಿನ ಸಂಘರ್ಷವನ್ನು ನೋಡಬಹುದು. ಮತೀಯವಲ್ಲದ ಭಾರತದಲ್ಲಿ ಮುಸ್ಲಿಮನಾಗಿರು ವುದೆಂದರೆ ಇತರರ ಸಂದೇಹಕ್ಕೆ ಗುರಿಯಾಗುವುದು. ಇಸ್ಲಾಂ ರಾಷ್ಟ್ರೀಯತೆಗೆ ವಿರೋಧ ವ್ಯಕ್ತಪಡಿಸದೆ ಇದ್ದರೂ ಅದೊಂದು ಲೋಕ ಧರ್ಮವಾದ್ದರಿಂದ ರಾಷ್ಟ್ರೀ ಯತೆಯನ್ನು ಮೀರಿ ಧರ್ಮಕ್ಕೆ ನಿಷ್ಠನಾಗುವುದನ್ನು ಅಪೇಕ್ಷಿಸುತ್ತದೆ. ಯಾವ ರಾಷ್ಟ್ರಕ್ಕೂ ಬದ್ಧರಾಗಿರದೆ ತಮ್ಮ ಪರಂಪರಾಗತ ಧಾರ್ಮಿಕ ಜೀವನ ನಡೆಸುತ್ತಿದ್ದ ಯೆಹೂದಿಗಳನ್ನು ಯುರೋಪಿನಿಂದ ಹೊರಹಾಕುವುದಕ್ಕೂ ಜನಾಂಗ ಹತ್ಯೆಗೆ ಗುರಿ ಯಾಗಿಸುವುದಕ್ಕೂ ಇದೊಂದೆ ನೆಪವು ಸುಲಭವಾಗಿ ದೊರೆತ ಕಾರಣವಾಯಿತೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ದ್ವಿತೀಯ ಮಹಾ ಯುದ್ಧದ ನಂತರ ಅಸ್ತಿತ್ವಕ್ಕೆ ಬಂದ ಇಸ್ರೇಲ್ ಗಣ ರಾಜ್ಯವು ಡಯಾಸ್ಪೋರಾದಲ್ಲಿ ಹಂಚಿ ಹೋಗಿದ್ದ ಬೇರೆ ಬೇರೆ ದೇಶಗಳ



ಶೂದ್ರ

ಯೆಹೂದಿಗಳ ಆಯಾ ರಾಷ್ಟ್ರೀಯತೆಯನ್ನು ಒಮ್ಮೆಲೆ ವಿಪರ್ಯಾಸಕ್ಕೆ ಗುರಿಪಡಿಸಿದಂತೆ, 1947 ರಲ್ಲಿ ಭಾರತವು ಇಬ್ಭಾಗವಾಗಿ ಮತದ ತಳಹದಿಯಲ್ಲಿ ಪಾಕಿಸ್ತಾನವು ಅಸ್ತಿತ್ವಕ್ಕೆ ಬರುವುದರ ಮೂಲಕ ಪಾಕಿಸ್ತಾನಕ್ಕೆ ವಲಸೆ ಹೋಗದೆ ಭಾರತದಲ್ಲುಳಿದ ಮುಸ್ಲಿಮರ ಜನ ಜೀವನವು ಹಿಂದೂಗಳ ಸಂದೇಹ ದೃಷ್ಟಿಗೆ ಗುರಿಯಾಗಿರುವುದನ್ನು ಕಾಣಬಹುದು.

ಜನ ಸಮೂಹದ ಭಾವುಕ ಪ್ರಪಂಚವನ್ನು ಅತಿ ತೀವ್ರವಾಗಿ ಕದಕುವ ಮತ, ಭಾಷೆ, ವರ್ಣಗಳೇ ಮುಂತಾದ ಶಕ್ತಿಗಳಲ್ಲಿ ಯಾವುದೇ ಒಂದಾದರೂ ರಾಷ್ಟ್ರೀಯತೆಗೆ ತಳಹದಿಯಾಗಿ ನಿಲ್ಲಬಹುದೇ ಎಂದರೆ ಅದೂ ಇಲ್ಲ. ತೀರ ಈಚಿನ ಧರ್ಮವಾದ ಇಸ್ಲಾಂ ಕೂಡ ಎಲ್ಲೂ ಸುಸ್ಥಿರ ರಾಷ್ಟ್ರೀಯತೆಗೆ ಎಡೆಗೊಟ್ಟಿರುವುದು ಕಂಡುಬರುವುದಿಲ್ಲ. ಇಡಿಯ ಮಾನವ ಕೋಟಿಯನ್ನು ದೇವರ ವಿಶ್ವಾಸದಲ್ಲಿ ಒಂದು ಗೂಡಿಸುವ ಮಹತ್ವಾಕಾಂಕ್ಷೆ ಹೊಂದಿದ ಇಸ್ಲಾಂ ಅದರ ಆರಂಭ ದಿಸೆಯಲ್ಲಿ ಸಾಕಷ್ಟು ಗೆಲುವನ್ನು ಗಳಿಸಿದರೂ ನಂತರದ ಇತಿಹಾಸ ಈ ರೀತಿ ಮುನ್ನಡೆಯಲೇ ಇಲ್ಲ. ಎಂದರೆ ಧರ್ಮವೊಂದೇ ಅಂತಿಮ ನಿರ್ದೇಶನವಲ್ಲ ಎಂದಾಯಿತು. ಸದ್ಯದ ಇರಾನ್–ಇರಾಕ್ ಸಮರದ ಹಿನ್ನೆಲೆಯಲ್ಲಿ ಕೇವಲ ಶಿಯಾ–ಸುನ್ನಿ ಮತಭೇದವೊಂದೇ ಇರುವುದಿಲ್ಲ; ಇನ್ನೂ ಹಿಂದಕ್ಕೆ ಹೋದರೆ, ಶಿಯಾ–ಸುನ್ನಿ ಮತ ಭೇದ ಇಷ್ಟೊಂದು ದೊಡ್ಡದಾಗಿ ಬೆಳೆಯುವುದಕ್ಕೆ ಅರಬ್ ಮತ್ತು ಪರ್ಶಿಯನ್ ಸಂಸ್ಕೃತಿಗಳ ಕೆಲವೊಂದು ಮೂಲಭೂತ ವ್ಯತ್ಯಾಸಗಳು ಕಾರಣವಾಗಿರಲಾರವೆ ಎಂದು ಕೂಡ ಅನಿಸುತ್ತದೆ. ಪಶ್ಚಿಮ ಪಾಕಿಸ್ತಾನ ಮತ್ತು ಪೂರ್ವ ಪಾಕಿಸ್ತಾನಗಳು ಬೇರಾಗುವುದಕ್ಕೆ ಭೌಗೋಳಿಕ ಕಾರಣವೊಂದೆ ಮುಖ್ಯವಾಗಿರಲಿಲ್ಲ. ಸದ್ಯ ಪಾಕಿಸ್ತಾನದಲ್ಲಿ ಪಠಾಣರು ಮತ್ತು ಮೊಹಾಜಿರರ ನಡುವೆ ಆಗಾಗ ಸಂಭವಿಸುತ್ತಿರುವ ಘರ್ಷಣೆಯ ಕಾರಣಗಳೂ ಮತಕ್ಕೆ ಹೊರಗಿನವೇ. ಅದೇ ರೀತಿ, ಭಾಷಾ ಸಮಾನತೆಯಾಗಲಿ, ವರ್ಣ ಸಮಾನತೆಯಾಗಲಿ, ಸೈದ್ಧಾಂತಿಕ ವಿಶ್ವಾಸಗಳಾಗಲಿ ರಾಷ್ಟ್ರೀಯತೆಯ ತಳಹದಿಯಾಗಿ ಬಹುಕಾಲ ಎಲ್ಲೂ ಉಳಿದಿಲ್ಲವೆಂಬುದಕ್ಕೂ ಉದಾಹರಣೆಗಳನ್ನು ಕೊಡಬಹುದು. ನಾಜಿಸಮಿನ ತುಳಿತಕೊಳ್ಳಗಾದ ಯೆಹೂದ್ಯರಲ್ಲಿ ಹಲವರು ಜರ್ಮನ್ ಮಾತೃ ಭಾಷೆಯುಳ್ಳವರೇ ಆಗಿದ್ದರಲ್ಲದೆ ಅವರಲ್ಲಿ ಹಲವು ಮಂದಿ ಪ್ರಸಿದ್ಧ ಲೇಖಕರೂ ಸೇರಿದ್ದರು. ಇನ್ನು ವರ್ಣ ಮೂಲವನ್ನು ನೋಡಿದರೆ, ಪರಸ್ಪರ ಹೋರಾಡುತ್ತ ಬಂದಿರುವ ಹಿಂದೂ ಆರ್ಯರು ಮತ್ತು ಮುಸ್ಲಿಂ ಪರ್ಶಿಯನರು ಒಂದೇ ಮೂಲದಿಂದ ಬಂದವರು. ಅಂತಾರಾಷ್ಟ್ರೀಯ ಒಕ್ಕೂಟದಲ್ಲಿ ನಂಬಿಕೆಯಿರುವ ಕಮ್ಯೂನಿಸಂ ಕೂಡ ರಶಿಯಾ ಮತ್ತು ಚೀನಾಗಳನ್ನು ಒಂದುಗೂಡಿಸಲು ಸಮರ್ಥವಾಗಿಲ್ಲ. ಇಂಥ ಉದಾಹರಣೆಗಳು ಅನೇಕ.

ಈ ಉಪಾಧಿಗಳನ್ನು ತೆಗೆದುಕೊಂಡರೆ ಮನುಷ್ಯ ಸಮಾಜದ ದೃಷ್ಟಿಯಿಂದ ಯಾವುದು ಹೆಚ್ಚು ಶಕ್ತಿಪೂರ್ಣವಾದುದು, ಯಾವುದು ದುರ್ಬಲವಾದುದು ಎಂದು

ನಿರ್ಣಯಿಸುವುದು ಕಷ್ಟವಾಗುತ್ತದೆ. ಬಹುಶಃ ಇವೆಲ್ಲವೂ ಸಾಪೇಕ್ಷವಾದುವು, ಯಾವುದಕ್ಕೆ ಹೊರಗಿನಿಂದ ಗಂಡಾಂತರವಿದೆಯೆಂದು ಅನಿಸುತ್ತದೋ ಅವಾಗ ಅದು ಜಾಗೃತವಾಗುತ್ತದೆ. ತಮಿಳಿನಿಂದ ಅಪಾಯವಿದೆಯೆಂದು ಕನ್ನಡ ತನವೂ, ಉತ್ತರದಿಂದ ಅಪಾಯವಿದೆಯೆಂದು ದ್ರಾವಿಡತನವೂ, ಪಾಕಿಸ್ತಾನ ಅಥವ ಚೀನಾದಿಂದ ಅಪಾಯವಿದೆಯೆಂದು ಅನಿಸಿದಾಗ ಭಾರತೀಯತೆಯೂ ಜಾಗೃತಗೊಳ್ಳಬಹುದು. ಆದ್ದರಿಂದಲೆ ರಾಷ್ಟ್ರೀಯತೆಯೆನ್ನುವುದು ಯಾವಾಗಲೂ ಯುದ್ಧ ಪರಿಸ್ಥಿತಿಯಲ್ಲಿ (ಅಥವ ಅಂಥದೇ ಇತರ ಸ್ಪರ್ಧಾತ್ಮಕ ಸಂದರ್ಭಗಳಲ್ಲಿ) ಉದ್ರೇಕಗೊಳ್ಳುವಂಥ ಒಂದು ಮನಸ್ಥಿತಿ. ಇದು ಗೊತ್ತಿದ್ದೇ ಆಳುವ ಸರಕಾರ ಕೆಲವೊಮ್ಮೆ ಆಂತರಿಕ ಗೊಂದಲಗಳನ್ನು ಮುಚ್ಚಿಡುವುದಕ್ಕಾಗಿ ಸುಳ್ಳು ಸುಳ್ಳೇ ಬಾಹ್ಯಾಪಾಯದ ಗುಲ್ಲನ್ನು ಎಬ್ಬಿಸುತ್ತದೆ. ಹಿಂದೆ ರಾಜ ಮಹಾರಾಜರುಗಳು ದಂಡಯಾತ್ರೆಗಳನ್ನು ಅಶ್ವಮೇಧ ಯಾಗಗಳನ್ನು ಕೈಗೊಳ್ಳುತ್ತಿದ್ದರಲ್ಲವೆ !

ರಾಜಕೀಯ ಅರ್ಥದಲ್ಲಿ ರಾಷ್ಟ್ರೀಯತೆಯೆನ್ನುವ ಕಲ್ಪನೆ ಬಹಳ ಹಳತೇನಲ್ಲ ; ಬಹುಶಃ ಎರಡು ಶತಮಾನಗಳಿಂದ ಬೆಳೆದು ಬಂದಿರುವಂಥದು. ಹಿಂದಿನ ಕಾಲದಲ್ಲಿ ರಾಜ್ಯಗಳಿದ್ದುವು, ಸಾಮ್ರಾಜ್ಯಗಳಿದ್ದುವು, ಗ್ರೀಸ್ ಮೊದಲಾದ ಕಡೆ ಸ್ವಯಮಾಡಳಿತದ ನಗರಗಳಿದ್ದುವು. ಒಂದಲ್ಲ ಒಂದು ರೀತಿಯ ಸಮೂಹ ಭಾವನೆಗಳು ಎಲ್ಲಾ ಕಾಲದಲ್ಲಿಯೂ ಇದ್ದುವು. ಟ್ರಾಯ್‌ಯ ವಿರುದ್ಧ ಹೋರಾಟದಲ್ಲಿ ಗ್ರೀಸಿನ ಎಲ್ಲ ರಾಜ್ಯಗಳೂ ಯೋಧರನ್ನು ಕಳಿಸಿದವು, ಎಂದರೆ ಗ್ರೀಸ್ ಎಂಬೊಂದು ಸಮೂಹ ಭಾವನೆ ಇದ್ದಿರಲೇಬೇಕು. ಏನೇ ಇದ್ದರೂ ಇಂದಿನ ರಾಜಕೀಯ ಅರ್ಥದಲ್ಲಿ ರಾಷ್ಟ್ರೀಯತೆಯೆನ್ನುವ ಕಲ್ಪನೆ 19 ನೇ ಶತಮಾನಕ್ಕಿಂತ ಹಿಂದೆ ಹೋಗಲಾರದು. ಇಂದು, ಎರಡು ಮಹಾ ಯುದ್ಧಗಳ ನಂತರ, ನಾವು ರಾಷ್ಟ್ರೀಯತೆಯಿಂದ ಅಂತಾರಾಷ್ಟ್ರೀಯತೆಯ ಕಡೆಗೆ ನೋಡುತ್ತಿದ್ದೇವೆ. ಯಾವದೇ ಅಚ್ಚುಕಟ್ಟಾದ ರಾಷ್ಟ್ರವೂ ಒಂದು ಸ್ವಯಂಪೂರ್ಣ ದ್ವೀಪದಂತೆ ಬದುಕುವುದು ಸಾಧ್ಯವಿಲ್ಲವೆನ್ನುವುದು ಹೆಚ್ಚೆಚ್ಚು ಮನವರಿಕೆಯಾಗುತ್ತಾ ಇದೆ. ಇದಕ್ಕೆ ಬಹುಶಃ ಆರ್ಥಿಕ ಪರಿಸ್ಥಿತಿಯೊಂದೇ ಕಾರಣವಾಗಿರದೆ, ಎಲ್ಲ ಮನುಷ್ಯರೂ ಒಂದೇ ದೋಣಿಯ ಯಾತ್ರಿಕರೆಂಬ ಅರಿವೂ ಮಹತ್ವದ ಕಾರಣವಾಗಿದೆಯೆಂದು ತೋರುತ್ತದೆ. ಮನುಷ್ಯ ಕುಲವೊಂದೆ ವಲಂ ಎಂದು ರಾಷ್ಟ್ರ-ರಾಷ್ಟ್ರಗಳ ಭೇದವನ್ನು ತೊಡೆದು ಇಡೀ ಜಗತ್ತನ್ನೇ ಒಂದು ರಾಷ್ಟ್ರವನ್ನಾಗಿ ಮಾಡುವುದು ನಮ್ಮ ಸಕಲ ಸಮಸ್ಯೆಗಳಿಗೂ ಪರಿಹಾರವಾಗಬಹುದೆ ? ಈ ಗುರಿಯು ಎಷ್ಟೇ ಆಶಾದಾಯಕವಾಗಿ ಕಾಣಿಸಿದರೂ, ಮನುಷ್ಯರು ಹೇಗೆ ಪೂರ್ವ ಕಾಲದ ಬುಡಕಟ್ಟು ಜೀವನಕ್ಕೆ ಹೇಗೆ ಹಿಂದಿರುಗಲಾರರೋ ಹಾಗೆಯೆ ಎಲ್ಲ ಭಿನ್ನತೆಗಳನ್ನೂ ತೊಡೆದು ಏಕ ರಾಷ್ಟ್ರದ ಕಡೆಗೂ ಹೋಗುವುದು ಬಹುಶಃ ಅಸಾಧ್ಯದ ಮಾತು, ಎಷ್ಟೇ ಸಂಘರ್ಷ

ಗಳಿಂದ ಕೂಡಿಕೊಂಡಿದ್ದರೂ ಇವೆರಡು ಧ್ರುವಗಳ ನಡುವೆಯೇ ಮನುಷ್ಯ ಜೀವನ ತನ್ನ ಸಾಧ್ಯತೆಗಳನ್ನು ಕಂಡುಕೊಳ್ಳಬೇಕು.

ಇದರಲ್ಲಿ ಹತಾಶೆಗೊಳುವುದಕ್ಕೇನೂ ಇಲ್ಲ. 1980 ರಲ್ಲಿ ವೈದ್ಯಕೀಯಕ್ಕೆಂದು ನೊಬೆಲ್ ಪಾರಿತೋಷಕ ಪಡೆದ ಪ್ರೊಫೆಸರ್ ಶಾನ್ ದೂಸೆ ಎಂಬ ವಿಜ್ಞಾನಿ **ದಿ ಕುರಿಯರ್** (ಸಂಖ್ಯೆ 9 ; ಇಸವಿ 1986 ; ಪುಟ 34) ಪತ್ರಿಕೆಯಲ್ಲೊಂದು ಲೇಖನವನ್ನು ಬರೆದಿದ್ದಾರೆ. ಜೈವಿಕ ವೈವಿಧ್ಯತೆಯೆನ್ನುವುದು ಹೇಗೆ ಜೀವ ವಿಕಸನಕ್ಕೆ ಅಗತ್ಯವೆನ್ನುವುದನ್ನು ವಿವರಿಸುತ್ತ (ಮನುಷ್ಯನ ಜೆನಿಟಿಕ್ ಸಾಧ್ಯತೆಗಳೇ ವಿಶ್ವದ ಅಣುಗಳ ಒಟ್ಟಾರೆ ಮೊತ್ತಕ್ಕಿಂತ ಜಾಸ್ತಿ !), ನಮ್ಮ ಸಾಂಸ್ಕಾರಿಕ ಬದುಕಿನ ಬೆಳವಣಿಗೆಗೆ ಕೂಡ ಇಂಥದೇ ವೈವಿಧ್ಯತೆಯು ಅಗತ್ಯವಿದೆಯೆಂದು ಈ ವಿಜ್ಞಾನಿಯ ವಾದ. ಇಂದಿನ ಜಗತ್ತು ಎರಡು ಅಪಾಯಗಳನ್ನು ಎದುರಿಸಬೇಕಾಗಿದೆ : ಸಾಮಾನ್ಯೀಕರಣ (standardization) ಮತ್ತು ಅಸಹಿಷ್ಣುತೆ (intolerance). ಸಾಮಾನ್ಯೀಕರಣವೆನ್ನುವುದು ಜೈವಿಕ ಕ್ರಿಯೆಯಲ್ಲಿ ಹೇಗೋ ಹಾಗೆ ವಿಕಸನವನ್ನು ನಿಲ್ಲಿಸಿ ವಿನಾಶಕ್ಕೆ ಕಾರಣವಾಗುವುದು. ಅಸಹಿಷ್ಣುತೆ ಕೂಡ ನಮ್ಮ ಬದುಕು ಮತ್ತು ಮನಸ್ಸಿನ ಗಡಿಗಳನ್ನು ಮುಚ್ಚಿಬಿಡುವುದರ ಮೂಲಕ ಸಾಮಾನ್ಯೀಕರಣ ಮಾಡುವುದನ್ನೇ ಮಾಡುತ್ತದೆ : ಎಂದರೆ ವಿಕಸನಕ್ಕೆ ಮಾರಕವಾಗುತ್ತದೆ.

ಹೇಗೆ ರಾಷ್ಟ್ರವೆನ್ನುವ ಘಟಕವು, ಒಂದು ದ್ವೀಪವಲ್ಲವೋ ಹಾಗೆ ಮತ ಧರ್ಮ ಭಾಷೆ ಇತ್ಯಾದಿಗಳು ಕೂಡ ದ್ವೀಪಗಳಲ್ಲ. ಇತರ ಸಂಸ್ಕೃತಿಗಳೊಂದಿಗೆ ಸಂಪರ್ಕ ಒಂದು ಸಂಸ್ಕೃತಿಯ ಬೆಳವಣಿಗೆಗೆ ತೀರ ಅಗತ್ಯ, ಉಷ್ಟ್ರಪಕ್ಷಿಯ "ನೀ ನನ್ನ ಮುಟ್ಟಬ್ಯಾಡ" ಧೋರಣೆಯಿಂದ ಯಾವ ಘಟಕವೂ ಬೆಳೆಯಲಾರದು, ತನ್ನ ತನವನ್ನು ಬಿಟ್ಟುಕೊಡದೆ ಒಂದೊಂದು ಘಟಕವೂ ಹೇಗೆ ಬೆಳೆಯಬೇಕೆನ್ನುವುದೆ ಮೂಲಭೂತವಾದ ಸಮಸ್ಯೆ. ಕೆಲವೊಮ್ಮೆ ಹೊರಗಿನಿಂದ ಸಾಲ ಪಡೆಯುವುದು ಅಗತ್ಯವಾಗುತ್ತದೆ ಉದಾಹರಣೆಗೆ, ಭಾಷೆಯ ಬೆಳವಣಿಗೆಗೆ ಬೇರೆ ಭಾಷೆಗಳ ಸಂಪರ್ಕ ಆಗಾಗ ಬೇಕಾಗುವುದು ಕಂಡು ಬಂದಿದೆ. ಇಂಥ ಪರಿಸ್ಥಿತಿಯಲ್ಲಿ ಕೆಲವೊಂದು ಭಾಷೆಗಳು, ಮತಧರ್ಮಗಳು, ಸಂಸ್ಕೃತಿಗಳು, ರಾಷ್ಟ್ರಗಳು ಕೂಡ ನಾಶವಾಗುವುದು ಸಾಧ್ಯವಿಲ್ಲವೆ ಎಂದು ಕೇಳಿದರೆ ಅಂಥ ಸಾಧ್ಯತೆಯಿದೆಯೆಂದೆ ಹೇಳಬೇಕಾಗುತ್ತದೆ. ಆದರೆ ಅತಿರಕ್ಷಣೆ ಇದಕ್ಕೆ ಉತ್ತರವಲ್ಲ. ಒಂದು ಸಂಸ್ಕೃತಿಯು ಇತರ ಸಂಸ್ಕೃತಿಗಳ ಸಂಪರ್ಕ ಮಾತ್ರಕ್ಕೆ ನಾಶವಾಗಬಲ್ಲುದಾದರೆ ಅಂಥ ಸಂಸ್ಕೃತಿಯನ್ನು ಕಾಪಾಡುವ ಅಗತ್ಯವಾದರೂ ಇದೆಯೇ ? ಒಂದು ಸಂಸ್ಕೃತಿಯ ಬಲವರ್ಧನೆ ಮಾಡುವುದೆಂದರೆ ಅದರ ಅಂತಃಸತ್ವವನ್ನು ವೃದ್ಧಿಸುವುದೊಂದೇ ಆಗಿದೆ.

ಹಾಗೆಯೇ ಒಂದು ರಾಷ್ಟ್ರವೆಂದರೆ ಅದಕ್ಕೂ ಎರಡು ರೀತಿಯ ಬದುಕುಗಳಿವೆ. ಅದರ ಬಾಹ್ಯ ಸಂಪರ್ಕಕ್ಕೆ, ಇತರ ರಾಷ್ಟ್ರಗಳ ಮಧ್ಯೆ ಅದರ ಅಸ್ತಿತ್ವ ಹೇಗಿದೆ ಎಂಬ ಪ್ರಶ್ನೆಗೆ ಸಂಬಂಧಿಸಿ ಒಂದು ಮುಖ. ಆಂತರಿಕ ಜೀವನಕ್ಕೆ, ವಿವಿಧ ಘಟಕಗಳು ಪರಸ್ಪರ ಹೇಗೆ ವರ್ತಿಸುತ್ತವೆ ಎಂಬುದಕ್ಕೆ ಸಂಬಂಧಿಸಿ ಇನ್ನೊಂದು ಮುಖ. ಬಾಹ್ಯದ ಒತ್ತಡಗಳು ಒಂದು ರಾಷ್ಟ್ರವನ್ನು ದುರ್ಬಲಗೊಳಿಸಬಹುದಾದಂತೆಯೆ, ಆಂತರಿಕ ಸಂಘರ್ಷಗಳು ಕೂಡ ಅದರ ಶಕ್ತಿಯನ್ನು ನಾಶಗೊಳಿಸಬಲ್ಲವು. ಭಾಷೆ, ಮತ, ವರ್ಣ, ಭೂಗೋಳ, ರಾಜಕೀಯ ಸಿದ್ಧಾಂತ ಮುಂತಾದ ಎಲ್ಲದರಲ್ಲೂ ಏಕಮುಖವಾದ ರಾಷ್ಟ್ರವೊಂದು ಎಲ್ಲೂ ದೊರೆಯಲಾರದು. ಆಂತರಿಕ ಭಿನ್ನತೆಗಳನ್ನು ಒಪ್ಪಿಕೊಂಡೇ ರಾಷ್ಟ್ರವೆಂಬುದು ಬದುಕಬೇಕು.

ಹೀಗಿರುತ್ತ ಅತ್ಯಂತ ಸಮೂಹ ಸಂಘರ್ಷಗಳನ್ನು ಹೊಂದಿರುವ ಭಾರತದಂಥ ದೇಶದಲ್ಲಿ ಲೇಖಕನೊಬ್ಬ ರಾಷ್ಟ್ರೀಯತೆಯ ಬಗ್ಗೆ (ಹಾಗೂ ಈ ಸಂಘರ್ಷಗಳ ಬಗ್ಗೆ) ಯಾವ ರೀತಿಯ ಧೋರಣೆಯನ್ನು ಹೊಂದಿರಬೇಕೆಂಬ ಪ್ರಶ್ನೆಯೇಳುತ್ತದೆ. ರಾಷ್ಟ್ರೀಯತೆಯನ್ನು ಕಾಪಾಡುವುದಕ್ಕಾಗಲಿ, ಅದರ ಬಗ್ಗೆ ಜನರಲ್ಲಿ ಅರಿವು ಮೂಡಿಸುವುದಕ್ಕಾಗಲಿ ಸಾಹಿತ್ಯ ರಚನೆಯಾಗಬೇಕೆಂದು ನನಗನಿಸುವುದಿಲ್ಲ. ಸಾಹಿತ್ಯದ ಮೇಲಿನ ಜವಾಬ್ದಾರಿ ಇದಕ್ಕಿಂತ ಸೂಕ್ಷ್ಮವಾದುದು. ರಾಷ್ಟ್ರೀಯತೆಯನ್ನು ಕಾಪಾಡುವುದಕ್ಕೆ ಸರಕಾರವಿದೆ ಹಾಗೂ ರಾಷ್ಟ್ರಿಯತೆಯೆನ್ನುವುದೊಂದು ಸಾಧನವೇ ಹೊರತು ಅಂತಿಮ ಗುರಿಯಲ್ಲ. ರಾಷ್ಟ್ರೀಯತೆಯ ಹೆಸರಲ್ಲಾಗಲಿ, ಇನ್ನಾವುದೇ ವ್ಯವಸ್ಥೆ ಅಥವಾ ಹಿತಾಸಕ್ತಿಗಳ ಹೆಸರಲ್ಲಾಗಲಿ ನಡೆಯಬಹುದಾದ ವಿಕಸನ ವಿರೋಧಿ ಕೃತ್ಯಗಳನ್ನು ಸಾಹಿತ್ಯ ಬಯಲುಗೊಳಿಸಬೇಕು. ಅದೇ ರೀತಿ ಒಂದು ಪಂಗಡವು ಇನ್ನೊಂದು ಪಂಗಡದ ಮೇಲೆ ಹೇರಬಹುದಾದ ಒತ್ತಡಗಳ ವಿರುದ್ಧ ಹೋರಾಡುವುದೂ ಸಾಹಿತ್ಯದ ಧರ್ಮವೇ. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಇಂಥ ಒತ್ತಡ ಮೈನಾರಿಟಿಯ ಮೇಲೆ ಮೆಜಾರಿಟಿ ನಡೆಸುವುದಾಗಿರಬಹುದು. ಅಥವಾ ಮೈನಾರಿಟಿಯ ಒಲವನ್ನು ಗಳಿಸಲು ಇತರ ಪಂಗಡಗಳು ಆ ಮೈನಾರಿಟಿ ಸಮಾಜದ ಕೆಲವು ದಮನೀಯ ಪ್ರವೃತ್ತಿಗಳನ್ನು ಒಪ್ಪಿಕೊಳ್ಳುವುದೂ ಆಗಿರಬಹುದು. ಈಯೆರಡು ವಿದ್ಯಮಾನಗಳೂ ಸಮೂಹ ವಿರೋಧಿಗಳೇ ಸರಿ.

ತನ್ನ ಕಾಲದ ಮನಸ್ಸಾಕ್ಷಿಯಾಗಿ ಕೆಲಸ ಮಾಡಬೇಕಾದ ಸಾಹಿತಿ, ಹೇಗೆ ಮನಸ್ಸಾಕ್ಷಿಯು ಹೊರಗಿನ ಯಾವುದೇ ಶಕ್ತಿಗಳಿಗೆ ಮಣಿಯದೆ ಒಳದನಿಯಲ್ಲಿ ಮಾತಾಡುತ್ತಿರುತ್ತದೆಯೋ, ಅದೇ ರೀತಿ ತನ್ನ ಬರಹಗಳ ಮೂಲಕ ಜನರ ಪ್ರಜ್ಞೆಯನ್ನು

ತಲಪುತ್ತಲೇ ಇರುತ್ತಾನೆ. ಆದ್ದರಿಂದಲೆ, ಸಾಹಿತ್ಯವು ಜನರನ್ನು ಬಡಿದೆಬ್ಬಿಸುತ್ತದೆ ಎನ್ನುವುದಕ್ಕಿಂತ ಅವರನ್ನು ಆತ್ಮ ಶೋಧನೆ ಮಾಡಲು ಹಚ್ಚುತ್ತದೆ ಎನ್ನುವುದೇ ಸರಿಯಾದ್ದು. ನಿಜವಾದ ಸಾಹಿತ್ಯವು ನಿರಂತರವಾಗಿ ವಿರೋಧ ಪಕ್ಷದ ಜತೆಯಿರುವುದಕ್ಕೆ ಹಾಗೂ ದಮನ ವಿರೋಧಿಯಾಗಿರುವುದಕ್ಕೆ ಅದು ಜೀವ ವಿಕಸನದ ನಿಗೂಢ ಕ್ರಿಯೆಯಲ್ಲಿ ಪಾಲುಗೊಳ್ಳುತ್ತಿರುವುದೇ ಕಾರಣ.

[ಈ ಪ್ರಬಂಧವನ್ನು ಇತ್ತೀಚೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ನಡೆಸಿದ 40ನೇ ಸ್ವಾತಂತ್ರ್ಯೋತ್ಸವ ಹಾಗೂ ಕನ್ನಡ ಸಾಹಿತ್ಯ ಸಂದರ್ಭ ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದು.]

●

## ಕ್ರಿಯೆ

ರವಿಕಿರಣದ ಬೆರಳಾಡಿ
ಹೂವು ಅರಳುತಿದೆ ಕೆರಳದಿರಿ
ಹಚ್ಚಹಸಿರಿನ ಹಿನ್ನೆಲೆಯಲಿ
ಇಬ್ಬನಿಯಲಿ ಮಿಂದು
ಬೆಳ್ಳಗೆ ಬಿರಿಯುತಿದೆ
ದಳ ದಳವು ನಳ ನಳಿಸಿ
ಜಗದ ಚೆಲುವೆಲ್ಲ ದುಡಿಯುತಿಹುದಿಲ್ಲಿ
ನಿನ್ನೆ ಸಂಜೆಗಷ್ಟೆ ಮೊಗ್ಗು
ಈಗ ಈಪರಿಯ ಹಿಗ್ಗು
ಅಂಗಳದಲ್ಲಿ ವೃತ್ತ ಪತ್ರಿಕೆ ಸಾರುತಿದೆ ಸುದ್ದಿ
ಕಪ್ಪು ಅಕ್ಷರಗಳಿಕ್ಕಟ್ಟಿನಲಿ
ಮಂದಿ ಸತ್ತಿದ್ದಾರೆ
ಮಧ್ಯ ಪುಟದಲಿ ರಂಗು ಚಲ್ಲುವ
ಜಾಹಿರಾತಿನ ಪ್ರಮದೆಯರು
ನದಿ, ನದಿ ತಟಾಕಗಳಲಿ ಹರಿದಿದೆಯೇ ನೀರು

೨

ತಲಸ್ಪರ್ಶಿಯಾಗಿದೆ
ಬಿಳಿಯ ಹಾಳೆಯ ಮೇಲೆ ಮೊಳೆತ ಭಾವಗಳು
ಇವು ಗಾಳಿಗುದುರೆ ಏರಿ
ಎತ್ತರದವರ ಎದೆ ಮುಟ್ಟೀತೇ
ಹರಿದೀತೇನು ಅವರ ಕಾರುಣ್ಯದೊರತೆ
ಕಣಿವೆಯಾಳದ ಜಗಕೆ

---

ಎಸ್. ಎನ್. ಪ್ರಸಾದ್, ವಿಜಯಾ ಬ್ಯಾಂಕ್, ಚನ್ನಪಟ್ಟಣ, ಬೆಂಗಳೂರು ಜಿಲ್ಲೆ

ಮಣ್ಣು ತೆರೆದ ಹಾದಿಗಳಲಿ
ನೆರಳು ಸರಿಸುವ ಮಂದಿ
ಹೆಜ್ಜೆ ನಿಚ್ಚಳ
ಬೆನ್ನಿಗೆ ಬಿದ್ದನೊಗ
ಕಂಡಿತ್ತೇ ಇವರ ನಗೆಮೊಗ
ಉಸಿರೇ ಬಾರ ಎದೆಗೆ
ಇನ್ನೂ ಮಿಂಚಿದೆ ಕಣ್ಣಲ್ಲಿ
ಜೀವ ಹೋಗುತಿದೆ ಕಾಣದ ಹಸಿರಿಗೆ

೩

ಅರ್ಥ ಪೂರಕೆಯೇ ಖಾಲಿಯಾಗಿದೆ
ಮನೆ ತುಂಬ ಮುರಿದ ಅಂಚಿಕಡ್ಡಿ ಬಿಲ್ಲು
ಗೋಜಾದ ದಾರ, ಬಾಣ, ಬತ್ತಳಿಕೆ, ಅಟ್ಟಹಾಸ
ಇದು ಯುದ್ಧವಲ್ಲ ಬಾಲರಾಮನ ಹನುಮದ್ವಿಲಾಸ

ನಾನೇ ಹನುಮ ಇವಳೇ ಸೀತೆ
ಲಕ್ಷ್ಮಣ ಎಲ್ಲ ನಿಜ ಬಣ್ಣದಲ್ಲೆ
ಪ್ರತಿಮೆಗಳು ಪುರಾಣ ಪಾತ್ರ
ಎಂದಿಗೂ ರಾಮನೆ ಇವನು ಮಾತ್ರ

ಅಗೋ ಮಾಯಾಜಿಂಕೆ ಮಾರೀಚ
ಮರೆಗೆ ನಿಂತ ರಾವಣ ಸೂತ್ರ
ಮತ್ತೆ ಜಟಾಯು ರಕ್ತಪಾತ
ಹೀಗುಂಟು ಪಾತ್ರದ ಗಾತ್ರ

೪

ಎಲ್ಲಿದೆ ಇದರ ಬೇರು
ಮೂಲ ಕಾರಸ್ಥಾನ
ಒಳಗೆಲ್ಲೋ ಹರಿವ ಎಲ್ಲೆಲ್ಲೂ ತೆರೆದ
ಸುಪ್ತ ಸ್ರೋತ
ವಾಗರ್ಥಗಳಲಿ ಮೊಳೆತು
ತೃಣ ಶಿರದಲಿ ಹೊಳೆವ ಸುಪ್ರಭಾತ

—ಎಸ್. ಎನ್. ಪ್ರಸಾದ್

●

# ಮಹಿಳೆ ಮತ್ತು ಅಭಿವೃದ್ಧಿ--ವಿಲ್ಲಿ ಬ್ರ್ಯಾಂಟಿ

ಅಭಿವೃದ್ಧಿಗೆ ಮಹಿಳೆಯರು ನೀಡುವ ಕೊಡುಗೆ ಹಾಗೂ ಮಹಿಳೆಯರ ಬದುಕಿನ ಮೇಲೆ ಅಭಿವೃದ್ಧಿ ಮಾಡುವ ಪರಿಣಾಮಗಳನ್ನು ಅರ್ಥ ಮಾಡಿಕೊಳ್ಳದಿರುವ ಅಭಿವೃದ್ಧಿಯ ಯಾವುದೇ ನಿರ್ವಚನ ಅಪೂರ್ಣವಾಗುತ್ತದೆ. ಅಭಿವೃದ್ಧಿಯ ಯಾವುದೇ ನೀತಿ, ಯೋಜನೆ ಅಥವಾ ಕಾರ್ಯಕ್ರಮ ಮಹಿಳೆಯರ ಮೇಲೆ ಪರಿಣಾಮವನ್ನು ಉಂಟು ಮಾಡೇ ಮಾಡುತ್ತದೆ, ಹಾಗೂ ಮಹಿಳೆಯರು ಅದರಲ್ಲಿ ಪಾತ್ರ ವಹಿಸದೇ ಇದ್ದಲ್ಲಿ, ಅದು ಯಶಸ್ವಿಯೂ ಆಗುವುದಿಲ್ಲ. ಇನ್ನೂ ಒಳ್ಳೆಯ ಉದ್ಯೋಗಗಳು ಮಹಿಳೆಯರಿಗೆ ಸಿಕ್ಕುವಂತೆ ಅವಕಾಶವನ್ನು ಒದಗಿಸುವ; ತಾವು ಮಾಡುತ್ತಿರುವ ಪಾರಿವಾರಿಕ ಹಾಗೂ ವ್ಯವಸಾಯದ ಕೆಲಸಗಳಲ್ಲಿ ಕೋಟ್ಯಾಂತರ ಮಹಿಳೆಯರು ಎದುರಿಸುತ್ತಿರುವ ಶ್ರಮದ ಕಠೋರತೆಯನ್ನು ಕಡಿಮೆ ಮಾಡುವ ಹಾಗೂ ಆರ್ಥಿಕ ಅಭಿವೃದ್ಧಿ ಮತ್ತು ಸೃಜನಾತ್ಮಕ ಕೆಲಸದ ಅವಕಾಶಗಳು ಪುರುಷರು ಹಾಗೂ ಮಹಿಳೆಯರ ನಡುವೆ ನ್ಯಾಯಯುತವಾಗಿ ಹಂಚಿಕೆಯಾಗುವಂತೆ ಮಾಡುವ ಕ್ರಮಗಳನ್ನು ತಕ್ಷಣ ಕೈಗೊಳ್ಳಬೇಕು. ಇದೇ "ಸಾಮಾಜಿಕ ನ್ಯಾಯದೊಂದಿಗೆ ಅಭಿವೃದ್ಧಿ" ಎಂಬ ಪರಿಕಲ್ಪನೆಯ ಅರ್ಥ.

ಆದರೂ ಕೂಡಾ, ಆರ್ಥಿಕ ಅಭಿವೃದ್ಧಿ ಎಂದರೆ, ಅದು ಬರಿ ಪುರುಷರ ವಿಷಯವೇನೋ ಎಂಬಂತೆಯೇ ಇನ್ನೂ ಚರ್ಚಿಸಲಾಗುತ್ತದೆ. ಮನೆಯ ಯಜಮಾನನಾಗಿರುವ ಪುರುಷನು, ಯೋಜನೆಗಳಿಂದ ಲಾಭ ಪಡೆದರೆ, ಆ ಪರಿವಾರಗಳಲ್ಲಿರುವ ಮಹಿಳೆಯರು ಹಾಗೂ ಮಕ್ಕಳು ಕೂಡಾ ಲಾಭ ಪಡೆಯುತ್ತಾರೆ ಎಂಬ ನಂಬಿಕೆಯೊಂದಿಗೆ ಯೋಜನೆಗಳು ಹಾಗೂ ಕಾರ್ಯಕ್ರಮಗಳನ್ನು ಪುರುಷರೇ ತಯಾರಿಸುತ್ತಾರೆ ಹಾಗೂ ಪುರುಷರೇ ಕಾರ್ಯಗತಗೊಳಿಸುತ್ತಾರೆ ಕೂಡಾ. ಮಹಿಳೆಯರ ಸಮಸ್ಯೆಗಳನ್ನು ಒಂದು ಸಮಾಜದ ಸಂರಚನೆ ಹಾಗೂ ಸಂಸ್ಕೃತಿಯ ಒಂದು ಮುಖವೆಂದು ಭಾವಿಸದೆ, ಅವುಗಳನ್ನು ಪ್ರತ್ಯೇಕವೆಂದೇ ಭಾವಿಸಲಾಗುತ್ತದೆ. ಅಭಿವೃದ್ಧಿಯ ದಿಕ್ಕಿನಲ್ಲಿ ನಡೆಸಲಾಗುತ್ತಿರುವ ಪ್ರತಿ ಕಾರ್ಯಕ್ರಮದಲ್ಲಿ ಮಹಿಳೆಯರ ಪ್ರಗತಿಯನ್ನು ಒಂದು ಪ್ರಜ್ಞಾಪೂರ್ಣ ಅಂಶವೆಂದು ಪರಿಗಣಿಸುವುದು ಅತ್ಯಾವಶ್ಯಕ.

---

ಅನು : ಬಾಪುಹೆದ್ದೂರಶೆಟ್ಟಿ, ಅಧ್ಯಕ್ಷರು, ಕರ್ನಾಟಕ ಆಹಾರ ಸರಬರಾಜು ಅಭಿವೃದ್ಧಿ ನಿಗಮ,
ಶೇಷಾದ್ರಿಪುರಂ, ಬೆಂಗಳೂರು-560 020

ಮಹಿಳೆಯರಿಗೆ ಹಲವು ಗುಣಾತ್ಮಕ ಪ್ರೋತ್ಸಾಹಗಳನ್ನು ನೀಡದೇ ಹೋದಲ್ಲಿ, ಅವರು ಕೆಲಸ ಮಾಡುತ್ತಿರುವ ಕ್ಷೇತ್ರಗಳಲ್ಲಿ ಯೋಜನೆಗಳು ಯಶಸ್ವಿಯಾಗುವುದಿಲ್ಲ ಎನ್ನುವುದನ್ನು ಅನುಭವ ತೋರಿಸಿಕೊಡುತ್ತದೆ. ಉದಾಹರಣೆಗೆ, ಹೊಸ ಬೆಳೆಗಳ ಕೃಷಿ, ಮಹಿಳೆಯರ ಕಲ್ಯಾಣದ ಮೇಲೆ ವ್ಯತಿರಿಕ್ತ ಪ್ರಭಾವ ಬೀರುವುದು ಸಾಧ್ಯವಿರುತ್ತದೆ; ಕಡಿಮೆ ಕೂಲಿಗೆ ಸಿಗುತ್ತಾರೆಂಬ ಕಾರಣದಿಂದ ಮಹಿಳೆಯರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಹಲವು ಕೈಗಾರಿಕಾ ಅಭಿವೃದ್ಧಿಯ ಯೋಜನೆಗಳು ಪಾರಿವಾರಿಕ ಬದುಕಿನ ಗುಣಮಟ್ಟ ಹಾಗೂ ಮನೆಯಲ್ಲಿ ಆಗುವ ಕೆಲಸದ ಹಂಚಿಕೆ–ಎರಡನ್ನೂ ಪ್ರತಿಕೂಲ ರೀತಿಯಲ್ಲಿ ಪ್ರಭಾವಿತಗೊಳಿಸುತ್ತವೆ. ಯೋಜನೆಯ ಲಾಭ ಅವರಿಗೆ ಖಂಡಿತವಾಗಿಯೂ ತಲುಪುವಂತೆ ಆ ಯೋಜನೆಯ ಒಳಗಡೆಯೇ ವ್ಯವಸ್ಥೆ ಮಾಡದೇ ಹೋದಲ್ಲಿ, ಮಹಿಳೆಯರು ಮತ್ತು ಮಕ್ಕಳಿಗಾಗಿಯೇ ರಚಿಸಲಾದ ಕಲ್ಯಾಣಕಾರಿ ಯೋಜನೆಗಳು ಕೂಡಾ ಅತ್ಯಂತ ಕಡಿಮೆ ಪರಿಣಾಮ ಬೀರತ್ತವೆ ಎಂಬುದು ಕಂಡು ಬಂದಿದೆ.

ಮಹಿಳೆಯರು ಎಲ್ಲಾ ಕಡೆಗಳಲ್ಲಿ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಅವರು ಸಹಭಾಗಿಗಳಾಗಿರುವುದಿಲ್ಲ. ಏಕೆಂದರೆ ಶಿಕ್ಷಣ, ತರಬೇತಿ, ಉದ್ಯೋಗ, ಭೂ ಒಡೆತನ, ಸಾಲ, ವ್ಯಾಪಾರದ ಅವಕಾಶಗಳು, ಅಷ್ಟೇ ಏಕೆ, (ಹಲವು ದೇಶಗಳಲ್ಲಿ ಮರಣಕ್ಕೆ ಸಂಬಂಧಿಸಿದ ಅಂಕಿ–ಸಂಖ್ಯೆಗಳು ತೋರಿಸುವಂತೆ) ಆರೋಗ್ಯಕರ ಆಹಾರ ಹಾಗೂ ಬದುಕಲು ಬೇಕಾಗಿರುವ ಇನ್ನಿತರ ಅವಶ್ಯಕತೆಗಳಿಗೆ ಅವರಿಗೆ ಸಮನಾದ ಅವಕಾಶ ಸಿಕ್ಕದಿರುವಂತೆ ಅವರ ಸಾಮಾಜಿಕ ಸ್ಥಿತಿಗತಿಗಳು ಅಡ್ಡಿಯನ್ನುಂಟು ಮಾಡುತ್ತವೆ. ಉತ್ಪಾದನೆಯನ್ನೇ ಕೇಂದ್ರವನ್ನಾಗಿ ಮಾಡಿಕೊಂಡ ಸಮಾಜಗಳ ಬೆಳವಣಿಗೆ ಹಾಗೂ ಬಂಡವಾಳದ ಬಳಕೆಗಳು (ಅದು ಸಾಮಾಜಿಕ ಒಡೆತನ ಅಥವಾ ಖಾಸಗೀ ಒಡೆತನದಲ್ಲಿದ್ದರೂ ಕೂಡ) ಪುರುಷರ ಹಾಗೂ ಮಹಿಳೆಯರ ಕೆಲಸಗಳಿಗೆ ಸಮಾಜ ಕಟ್ಟುವ ಬೇರೆ ಬೇರೆ ಬೆಲೆಗಳ ನಡುವೆ ಇರುವ ಅಂತರವನ್ನು ಇನ್ನೂ ಹೆಚ್ಚು ಮಾಡಿವೆ.

ಸಾಂಪ್ರದಾಯಿಕವಾಗಿ ಪುರುಷರ ಕೆಲಸಗಳು ಎಂದು ಪರಿಗಣಿಸಲಾಗಿರುವ ಕೆಲಸಗಳಿಗೆ ಮಾತ್ರ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸಂಶೋಧನೆಗಳನ್ನು ಹಾಗೂ ತಾಂತ್ರಿಕ ಬೆಳವಣಿಗೆಗಳನ್ನು ಅನ್ವಯಿಸಲಾಗಿದೆ. ಆದರೆ, ಇದರ ಪರಿಣಾಮ ಪುರುಷರ ಪಾತ್ರದ ಪ್ರಾಧಾನ್ಯತೆಯನ್ನು ಹೆಚ್ಚಿಸುವುದೇ ಆಗಿದೆ. ಉದ್ದೇಶಪೂರ್ವಕವಾಗಿ ಸಾಮಾಜಿಕ ಹಾಗೂ ಸಂರಚನಾತ್ಮಕ ಸುಧಾರಣೆಗಳನ್ನು ಮಾಡುವ ಮೂಲಕ ಆರ್ಥಿಕ ಆಧುನೀಕರಣವನ್ನು ಸರಿದೂಗದೇ ಹೋದರೆ, ಅಂತಹ ಆಧುನೀಕರಣ ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚು ಬಾಧಕವಾಗಿ ಪರಿಣಮಿಸಬಹುದು. ಮಹಿಳೆಯರ ಉತ್ಪಾದನಾ ಶಕ್ತಿಯು



ಶೂದ್ರ

ಮೇಲೆ ಪ್ರಭಾವ ಬೀರುವ ಶಿಕ್ಷಣ, ತಾಂತ್ರಿಕತೆ ಹಾಗೂ ಇನ್ನಿತರ ವಿಷಯಗಳಲ್ಲಿ ಮಹಿಳೆಯರಿಗೆ ಸರಿಸಮಾನವಾದ ಅವಕಾಶಗಳು ಸಿಕ್ಕದೇ ಹೋದಲ್ಲಿ, ಬಹಳಷ್ಟು ವ್ಯಾಖ್ಯಾನಕಾರರು ಉತ್ತರ-ದಕ್ಷಿಣಗಳ ಸಂಬಂಧಗಳ ವೈಶಿಷ್ಟ್ಯವಾಗಿ ಕಾಣುವ "ಅಸಮಾನ ವಿನಿಮಯ"ವು ಪುರುಷರು ಹಾಗೂ ಮಹಿಳೆಯರ ನಡುವಣ ಸಂಬಂಧಗಳಲ್ಲಿಯೂ ಕಂಡುಬರಬಹುದೆಂದು ಹೇಳಲಾಗುತ್ತದೆ. ಇದನ್ನು ಮೀರಬೇಕಾದರೆ ಅಭಿವೃದ್ಧಿ ಹೊಂದುತ್ತಿರುವ ಹಾಗೂ ಕೈಗಾರಿಕೀರಣ ಹೊಂದಿರುವ ದೇಶಗಳಲ್ಲಿ ಮಹಿಳೆಯರು ಪುರುಷರಿಗೆ ಸಮಾನವಾದ ಸಾಮಾಜಿಕ ಸ್ಥಾನಮಾನ ಗಳಿಸಬೇಕು, ಸಮನಾದ ಅವಕಾಶಗಳನ್ನು ಹಾಗೂ ಸಮನಾದ ಕೆಲಸಗಳಿಗೆ ಸಮನಾದ ವೇತನವನ್ನು ಪಡೆಯಬೇಕು.

ಶ್ರಮವನ್ನು ಲೈಂಗಿಕ ಆಧಾರದ ಮೇಲೆ ವಿಭಜನೆ ಮಾಡುವ ವಿಧಾನ ಅತ್ಯಂತ ಪುರಾತನವಾದುದಷ್ಟೇ ಅಲ್ಲ, ಅದು ಸಾಂಸ್ಕೃತಿಕ ಭಿನ್ನತೆಗಳನ್ನೂ ಪ್ರತಿಬಿಂಬಿಸುತ್ತದೆ. ಇಂದು ಎಲ್ಲೆಡೆಯಲ್ಲಿ ಸಾಂಪ್ರದಾಯಿಕ ಕೆಲಸಗಳು ಬದಲಾವಣೆಗೆ ಒಳಪಡುತ್ತಿವೆ. ಈ ಪ್ರಕ್ರಿಯೆಯಲ್ಲಿ ಹಲವಾರು ಬಾರಿ ಅಸಮಾನತೆಯನ್ನು ತೊಡೆದುಹಾಕಲು ಸಾಂಪ್ರದಾಯಿಕ ಮನೋಭಾವನೆಗಳನ್ನು ಬದಲಾಯಿಸುವುದು ಅತ್ಯಾವಶ್ಯಕವಾಗುತ್ತದೆ. ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಯ ವಿಸ್ತೃತ ಪ್ರಯತ್ನಗಳು, ಯಶಸ್ವಿಯಾಗಬೇಕಾದರೆ ಪರಿವಾರದ ಮೌಲ್ಯಗಳಲ್ಲಿ ಹಾಗೂ ಸಂಬಂಧಗಳಲ್ಲಿ ಬದಲಾವಣೆಯಾಗಬೇಕು ಎಂಬುದನ್ನು ಇತ್ತೀಚೆಗೆ ಹೆಚ್ಚು ಹೆಚ್ಚು ಒಪ್ಪಿಕೊಳ್ಳಲಾಗುತ್ತಿದೆ. ಆದರೆ ಇತ್ತೀಚೆಗೆ ಮನುಷ್ಯನು ಬದಲಾವಣೆಗೆ ಎಷ್ಟೊಂದು ವಿರೋಧವನ್ನು ವ್ಯಕ್ತಪಡಿಸಬಹುದು ಎಂಬುದು ಕೂಡ ಇದರಿಂದಾಗಿ ಕಂಡುಬರುತ್ತಿದೆ.

ಮಹಿಳೆಯರ ಮೇಲೆ ಆಗುವ ಪರಿಣಾಮಗಳನ್ನು ಗಣನೆಗೆ ತೆಗೆದುಕೊಂಡಲ್ಲಿ, ಯೋಜನೆಗಳು ಹೆಚ್ಚು ಫಲಕಾರಿಯಾಗಬಲ್ಲವು. ಗ್ರಾಮಾಂತರ ಪ್ರದೇಶದಲ್ಲಿರುವ ಅತ್ಯಂತ ಬಡ ಮಹಿಳೆಯರ ಎರಡು ಅತ್ಯಂತ ಕಷ್ಟಕರ ಕೆಲಸಗಳೆಂದರೆ, ಉರುವಲು ಕಟ್ಟಿಗೆಯನ್ನು ಕೂಡಿಸುವುದು (ಅರಣ್ಯಗಳನ್ನು ನಾವು ಕಡಿಯುತ್ತಾ ಹೋದಂತೆಲ್ಲಾ) ಇವರು ಇದಕ್ಕಾಗಿ ಹೆಚ್ಚು ಹೆಚ್ಚು ದೂರ ನಡೆದುಕೊಂಡು ಹೋಗಬೇಕಾಗುತ್ತದೆ ಹಾಗೂ ಬಹಳ ದೂರದಿಂದ ನೀರನ್ನು ಹೊತ್ತುಕೊಂಡು ಬರುವುದು. ಉರುವಲು ಕಟ್ಟಿಗೆಗೆ ಪರ್ಯಾಯವನ್ನು ಒದಗಿಸುವ ಮೂಲಕ ಅರಣ್ಯಕ್ಷಯವನ್ನು ತಡೆಗಟ್ಟಬಹುದಷ್ಟೇ ಅಲ್ಲ, ಇದು ಮಹಿಳೆಯರಿಗೆ ಶಿಕ್ಷಣ ಪಡೆಯಲು, ಹೆಚ್ಚು ಹಣ ಸಂಪಾದಿಸಲು ಹಾಗೂ ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಹೆಚ್ಚು ಸಮಯವನ್ನು ಉಳಿಸುತ್ತವೆ. ಸ್ವಚ್ಛ ಹಾಗೂ ಹೆಚ್ಚು ಅನುಕೂಲಕರವಾದ ನೀರಿನ ಸರಬರಾಜು ಕೂಡಾ ಮಹಿಳೆಯರಿಗೆ ಇಂಥಹುದೇ

ಪ್ರಯೋಜನಗಳನ್ನು ಮಾಡಿಕೊಡುತ್ತದೆ. ಅಷ್ಟೇ ಅಲ್ಲ, ಅದು ಅವರ ಆರೋಗ್ಯಕ್ಕೆ ಕೂಡಾ ಒಳ್ಳೆಯದು. ಮಕ್ಕಳ ಕೇಂದ್ರಗಳನ್ನು ಸ್ಥಾಪಿಸುವುದರಿಂದ ಕೂಡಾ ಮಹಿಳೆಯರಿಗೆ ಹಲವಾರು ಪ್ರಯೋಜನಗಳಾಗುತ್ತವೆ. ಇವುಗಳಿಂದಾಗಿ ಮಕ್ಕಳು ಒಳ್ಳೆಯ ಆಹಾರವನ್ನು ಪಡೆಯುತ್ತವೆ ಅಷ್ಟೇ ಅಲ್ಲದೆ, ತಾಯಂದಿರು ಹೆಚ್ಚು ಚಲನಶೀಲರಾಗಬಹುದು ಹಾಗೂ ಅಂತಹ ಮಕ್ಕಳನ್ನು ನೋಡಿಕೊಳ್ಳಬೇಕಾಗಿ ಬರುತ್ತಿದ್ದ ಸ್ವಲ್ಪ ಬೆಳೆದ ಹೆಣ್ಣುಮಕ್ಕಳು ಶಾಲೆಗಳಿಗೆ ಹೋಗಬಹುದು. ಆಹಾರವನ್ನು ಒದಗಿಸುವಲ್ಲಿ ಮಹಿಳೆಯರಿಗಿರುವ ಪಾತ್ರದ ಬಗ್ಗೆ ನಾವು ಈಗಾಗಲೇ ಹೇಳಿದ್ದೇವೆ. ಆಫ್ರಿಕಾ ಬಗೆಗಿನ ಆರ್ಥಿಕ ನಿಯೋಗ ಹೇಳಿರುವಂತೆ, ಆಹಾರದ ಉತ್ಪಾದನೆ ಹಾಗೂ ವಿತರಣೆಯಲ್ಲಿ ಸುಧಾರಣೆ ಮಾಡದೇ ಇದ್ದರೆ, ಕೋಟ್ಯಾಂತರ ಜನ ಹಸಿವಿನಿಂದ ಬಳಲಬಹುದು ಎಂದು ಜಾಗತಿಕ ಮಾನವ ಸಮಾಜ ಒಂದೆಡೆ ಅರಚುತ್ತಿದ್ದರೆ, ಇನ್ನೊಂದೆಡೆಗೆ ಆಫ್ರಿಕಾದ ಆಹಾರ ಉತ್ಪಾದಕರಾದ ಮಹಿಳೆಯರನ್ನು ಬಹುಪಾಲು ಕಡೆಗಣಿಸಲಾಗುತ್ತಿದೆ. ತಮ್ಮ ಕಾರ್ಯಕ್ರಮಗಳಲ್ಲಿ ಹೇಗೆ ಮಹಿಳೆಯರನ್ನು ತೊಡಗಿಸಬಹುದು ಎಂಬ ಬಗ್ಗೆ ಎಫ್. ಎ. ಒ. ಹಾಗೂ ಜಾಗತಿಕ ಬ್ಯಾಂಕುಗಳು ನೀಡಿರುವ ನಿರ್ದೇಶನಗಳನ್ನು ಗಮನಿಸಬೇಕೆಂದು ನಾವು ಎಲ್ಲಾ ಸರ್ಕಾರಗಳಿಗೆ ಹಾಗೂ ಅಂತರರಾಷ್ಟ್ರೀಯ ಸಂಘಟನೆಗಳಿಗೆ ಕರೆ ನೀಡುತ್ತೇವೆ. ಯೋಜನೆಗಳು ಎಲ್ಲಾ ಹಂತಗಳಲ್ಲಿಯೂ ಮಹಿಳೆಯರನ್ನು ತೊಡಗಿಸುವುದು ಅತ್ಯಂತ ಅವಶ್ಯಕವಾಗಿದೆ.

ಇಂದು ಯಾವುದೇ ರಾಜಕೀಯ ವ್ಯವಸ್ಥೆ ತಾನೇ ತಾನಾಗಿಯೇ ಮಹಿಳೆಯರಿಗೆ ಸಮಾನವಾದ ಸ್ಥಾನಮಾನಗಳನ್ನು ನೀಡುವುದಿಲ್ಲ ಹಾಗೂ ಉತ್ಪಾದನೆಯನ್ನೇ ಕೇಂದ್ರವನ್ನಾಗಿ ಮಾಡಿಕೊಂಡಿರುವ ಸಮಾಜಗಳು ಸಾಮಾನ್ಯವಾಗಿ ಅವರ ಕೊಡುಗೆಗಳಿಗೆ ಹೆಚ್ಚಿನ ಮಹತ್ವ ನೀಡುವುದಿಲ್ಲ. ಮಹಿಳೆಯರ ಕೊಡುಗೆ ಒಂದು ಮನೆಯ ಒಳಗಡೆಗೆ ಇರುವುದರಿಂದ ಹಾಗೂ ಅದು ಶ್ರಮದ ಮಾರುಕಟ್ಟೆಯಲ್ಲಿ ಇಲ್ಲದೇ ಇರುವುದರಿಂದ, ಇಂತಹ ಕೊಡುಗೆಯನ್ನು ಸಂಖ್ಯಾಶಾಸ್ತ್ರದ ವಿಧಾನ ಸಂಪೂರ್ಣವಾಗಿ ಕಡೆಗಣಿಸುತ್ತದೆ. ಮಹಿಳೆಯರ ಶ್ರಮ ಹೆಚ್ಚಾಗಿ "ಅನೌಪಚಾರಿಕ ವಲಯ"ದಲ್ಲಿ ಕೇಂದ್ರೀಕೃತವಾಗಿರುವುದರಿಂದ ಅಥವಾ ಅದು ನಿರಂತರವಾಗಿರದೆ ಅಳತೆ ಮಾಡಲು ಕಷ್ಟಸಾಧ್ಯವಾಗಿರುವುದರಿಂದ, ಅವರ ಆರ್ಥಿಕ ಕೊಡುಗೆಗಳನ್ನು ಕೂಡ ಈ ವಿಧಾನಗಳು ಕಡೆಗಣಿಸುತ್ತವೆ. ಸಂಯುಕ್ತ ರಾಷ್ಟ್ರ ಸಂಘ ಅಂಕಿಸಂಖ್ಯೆಗಳು ಕೂಡಾ, ಮಹಿಳೆಯರೇ ನಿಜವಾದ ಆರ್ಥಿಕ ಮುಖ್ಯಸ್ಥರಾಗಿರುವ ಮನೆಗಳ ಸಂಖ್ಯೆಯನ್ನು ಸರಿಯಾಗಿ ಅಂದಾಜು ಮಾಡುವುದಿಲ್ಲ. ಏಕೆಂದರೆ ಅವು ಕೂಡ ನಿಜವಾದ ಆರ್ಥಿಕ ಕೊಡುಗೆಯನ್ನು ಪ್ರತಿಬಿಂಬಿಸುವ ಅಳತೆಗೋಲನ್ನು ಬಳಸದೇ ಮನೆಯ ಮುಖ್ಯಸ್ಥನ ವಕ್ರವಾದ ನಿರ್ವಚನಗಳನ್ನು ಬಳಸುತ್ತವೆ; ಈ ರೀತಿ ಮಹಿಳೆಯರು ಅಂಕಿ-ಸಂಖ್ಯೆಗಳಲ್ಲಿ



ಶೂದ್ರ

ಅದೃಶ್ಯವಾಗಿಯೇ ಉಳಿಯುತ್ತಾರೆ. ಆದರೂ ಕೂಡ ಅವರ ಕೊಡುಗೆಗಳು ಅನಿವಾರ್ಯ ಅಷ್ಟೇ ಅಲ್ಲ; ಮೂಲಭೂತ ಕೂಡ. ಅಷ್ಟೇ ಅಲ್ಲದೆ ಅವರಲ್ಲಿ ಹಲವಾರು ಜನ ಬರಲಿರುವ ಪೀಳಿಗೆಗಳ ಆರೋಗ್ಯ ಹಾಗೂ ಸಾಮರ್ಥ್ಯಗಳನ್ನು ರಕ್ಷಿಸುವಲ್ಲಿ ಅಳತೆ ಮಾಡಲಾಗದ ಆದರೆ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ತಮ್ಮ ಈ ಪಾತ್ರವನ್ನು ಅವರು ಪುರುಷರೊಂದಿಗೆ ಹೆಚ್ಚು ಸಮನಾಗಿ ಹಂಚಿಕೊಳ್ಳಲು ಬಯಸುತ್ತಾರೆ.

ಪುರುಷ ಹಾಗೂ ಮಹಿಳೆಯರ ನಡುವಣ ಶ್ರಮದ ವಿಭಜನೆಯನ್ನು ಅಭಿವೃದ್ಧಿ ಅನಿವಾರ್ಯವಾಗಿ ಬದಲಾಯಿಸುತ್ತದೆ. ಬಟ್ಟೆಗಳನ್ನು ತಯಾರು ಮಾಡುವ ಅಥವಾ ಎಲೆಕ್ಟ್ರಾನಿಕ್ಸ್ ಮುಂತಾದ ವಲಯಗಳಲ್ಲಿ ಹುಟ್ಟುವ ಹೊಸ ಕೆಲಸಗಳು ಮಹಿಳೆಯರಿಗೆ ಹೊಸ ಅವಕಾಶಗಳನ್ನು ಒದಗಿಸಿಕೊಡುತ್ತವೆ. ಆದರೆ ಸಾಂಪ್ರದಾಯಿಕ ಸಮಾಜಗಳ ಬದಲಿಗೆ ಆಧುನಿಕ ಹಣಕಾಸಿನ ವ್ಯವಸ್ಥೆಗಳು ಬಂದಾಗ ಬಹಳಷ್ಟು ಸಾರಿ ಮಹಿಳೆಯರನ್ನು ಅಂತಹ ವ್ಯವಸ್ಥೆಗಳಿಂದ ಹೊರಗಿಡಲಾಗುತ್ತದೆ ಹಾಗೂ ಇದರಿಂದಾಗಿ ಅವರ ಸ್ಥಾನಮಾನ ಕಡಿಮೆಯಾಗುತ್ತದೆ. ಅವರು ತಮ್ಮ ಸಾಂಪ್ರದಾಯಿಕ ಕೆಲಸಗಳನ್ನು ಕಳೆದುಕೊಳ್ಳುತ್ತಾರೆ. ಆದರೆ ಅವರ ಮನೆಗೆಲಸಗಳು ಮಾತ್ರ, ಸ್ಥಾನಮಾನ ಹಾಗೂ ಶ್ರಮದ ಬೆಲೆಯನ್ನು ನಿರ್ಧರಿಸುವ ಹಣಕಾಸಿನ ಅರ್ಥವ್ಯವಸ್ಥೆಯ ಹೊರಗಡೆಯೇ ಉಳಿಯುತ್ತವೆ. ಮಹಿಳೆಯರಲ್ಲಿ ಶಿಕ್ಷಣದ ಕೊರತೆ, ತರಬೇತಿಯ ಕೊರತೆ ಹಾಗೂ ಸಂಘಟನೆಯ ಕೊರತೆಗಳು ಅವರನ್ನು ಹೊಸ ತಾಂತ್ರಿಕ ಕೆಲಸಗಳಿಂದ ದೂರ ಇಡುವುದೇ ಅದಲ್ಲಿ, ಯಾಂತ್ರೀಕರಣ ಕೂಡಾ ಮಹಿಳೆಯರಿಗೆ ಶಾಪವೇ ಆಗುತ್ತದೆ. ಹೊಸ ಕೆಲಸಗಳ ನಿರ್ಮಾಣಕ್ಕಿಂತ ಹೆಚ್ಚು ತೀವ್ರವಾಗಿ ಸಾಂಪ್ರದಾಯಿಕ ಕೆಲಸಗಳು ಅದೃಶ್ಯವಾಗುತ್ತಾ ಹೋದಂತೆಲ್ಲಾ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರ ಸಂಖ್ಯೆ ಕಡಿಮೆಯಾಗುತ್ತದೆ ಎಂದು ಐ. ಎಲ್. ಓ. ಭಾವಿಸುತ್ತದೆ. ಮಹಿಳೆಯರು ತಮ್ಮ ಕೆಲಸಗಳಿಗೆ ಒಂದು ಬೆದರಿಕೆ ಇದ್ದಂತೆ, (ಅದರಲ್ಲೂ ಒಂದೇ ರೀತಿಯ ಕೆಲಸಕ್ಕೆ ಮಹಿಳೆಯರಿಗೆ ಕಡಿಮೆ ಸಂಬಳ ಕೊಡುವಾಗ) ಎಂದು ಪುರುಷರು ಭಾವಿಸುತ್ತಾರೆ. ಆದರೆ ಆದಾಯ ಹಾಗೂ ಪ್ರತಿಷ್ಠೆಯನ್ನು ಕೊಡುವಂತಹ ಕೆಲಸದ ಅವಕಾಶಗಳು ಪುರುಷ ಹಾಗೂ ಮಹಿಳೆಯರು ಇಬ್ಬರಿಗೂ ಬೇಕು.

ಪುರುಷರು ಗ್ರಾಮಾಂತರ ಪ್ರದೇಶಗಳಿಂದ ನಗರಗಳಿಗೆ ಅಥವಾ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಲಸೆ ಹೋದಾಗ ಕೂಡಾ ಮಹಿಳೆಯರು ಹಲವು ವಿಶಿಷ್ಟ ತೊಂದರೆಗಳನ್ನು ಅನುಭವಿಸುತ್ತಾರೆ. ಅವರನ್ನು ಮನೆ ನೋಡಿಕೊಳ್ಳಲು ಹಿಂದೆ ಬಿಟ್ಟುಹೋಗಲಾಗುತ್ತದೆ. ಹಾಗೂ ಬಹಳಷ್ಟು ಸಲ ಅವರು ಕಷ್ಟದ

ಪರಿಸ್ಥಿತಿಯಲ್ಲಿ ಕೆಲಸಗಳನ್ನು ಹುಡುಕಬೇಕಾಗುತ್ತದೆ. ಅದರಲ್ಲೂ ಆರ್ಥಿಕ ನಿರ್ಧಾರಗಳನ್ನು ಕೈಗೊಳ್ಳುವಲ್ಲಿ, ಅವರ ಅಧಿಕಾರವನ್ನು ಮೊಟಕುಗೊಳಿಸುವ ಕಾನೂನಿನ ಅಡೆತಡೆಗಳು ಅವರನ್ನು ಇನ್ನೂ ಹೆಚ್ಚಿನ ತೊಂದರೆಗೆ ಈಡು ಮಾಡುತ್ತವೆ. ಹಠಾತ್ತನೆ ಆದ ಬದಲಾವಣೆ ಸ್ವಲ್ಪ ದಿನಗಳ ಮಟ್ಟಿಗಾದರೂ ಅವರಿಗೆ ಹೆಚ್ಚಿನ ಬಡತನವನ್ನು ತಂದೊಡ್ಡುತ್ತದೆ. ತಮ್ಮ ಪರಿವಾರಗಳನ್ನು ಬಿಟ್ಟು ಮಹಿಳೆಯರು ವಲಸೆ ಹೋಗುವ ಸಂದರ್ಭಗಳಲ್ಲಂತೂ (ದಕ್ಷಿಣ ಅಮೇರಿಕಾದಲ್ಲಿ ಹೆಚ್ಚಾಗಿ ಆಗುವಂತೆ), ಅತಿ ಹೆಚ್ಚಿನ ಸಾಮಾಜಿಕ ಎಳೆತಗಳು ಉಂಟಾಗಬಹುದು. ಇಂತಹ ಸಂದರ್ಭಗಳಲ್ಲಿ ಕಾರ್ಮಿಕ ಸಂಘಟನೆಗಳಲ್ಲಿ ಮಹಿಳೆಯರಿಗೆ ಹೆಚ್ಚು ಅರ್ಥಪೂರ್ಣ ಪ್ರಾತಿನಿಧ್ಯದ ಅವಶ್ಯಕತೆ ಇರುತ್ತದೆ ಹಾಗೂ ಮಹಿಳೆಯರಿಗಾಗಿ ಕೈಗಾರಿಕಾ ಕಾರ್ಯಕ್ರಮಗಳನ್ನು ಕೊಡಲು ವಾಣಿಜ್ಯ ಸಂಘಟನೆಗಳು ಹಣವನ್ನು ಕಾಯ್ದಿರಿಸುವಂತೆ ಕ್ರಮವನ್ನು ಕೈಗೊಳ್ಳುವತ್ತ ಪ್ರಯತ್ನಗಳನ್ನು ಮಾಡಬಹುದು.

ಅತ್ಯಂತ ಬಡ ದೇಶಗಳಲ್ಲಿ ಮಹಿಳೆಯರು ಇನ್ನೂ ಹಲವಾರು ತೊಂದರೆಗಳನ್ನು ಅನುಭವಿಸುತ್ತಾರೆ. ಆರೋಗ್ಯಕ್ಕೆ ಅಪಾಯಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಉಂಟಾಗುವುದು ಮಕ್ಕಳಲ್ಲಿ ಹಾಗೂ ಗರ್ಭಿಣಿ ಸ್ತ್ರೀಯರಲ್ಲಿ. ಆದರೆ ಆರೋಗ್ಯದ ಸವಲತ್ತುಗಳ ಯೋಜನೆ ಮತ್ತು ವಿತರಣೆ ಈ ಸತ್ಯವನ್ನು ಪ್ರತಿಬಿಂಬಿಸುವುದಿಲ್ಲ. ಇದು ಕಡಿಮೆ ಆದಾಯ ಇರುವ ಹಲವಾರು ದೇಶಗಳಲ್ಲಿ ಕಂಡುಬರುವ ಪರಿಸ್ಥಿತಿಗಳಿಗೆ ಕಾರಣವಾಗುತ್ತದೆ. ಉದಾಹರಣೆಗೆ ಶ್ರೀಮಂತ ದೇಶಗಳಲ್ಲಿರುವ ಪರಿಸ್ಥಿತಿಗೆ ತದ್ವಿರುದ್ಧವಾಗಿ ಬಡ ದೇಶಗಳಲ್ಲಿ ಪುರುಷರಿಗಿಂತ ಮಹಿಳೆಯರ ಬದುಕಿನ ನಿರೀಕ್ಷೆ ಕಡಿಮೆ ಇರುವುದು, ಮಹಿಳೆಯರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಅನಿಮಿಯಾದಿಂದ ಬಳಲುತ್ತಿರುವುದು ಇತ್ಯಾದಿ. ಇದಲ್ಲದೇ, ಹಲವು ದೊಡ್ಡ ಬಡ ದೇಶಗಳಲ್ಲಿ ಅವರ ಆರೋಗ್ಯ ಕೆಟ್ಟುಹೋಗುತ್ತಿರುವುದು ಕಂಡುಬಂದಿದೆ. ಆದರೆ ಅಧಿಕಾರ ಹಾಗೂ ಮಾಹಿತಿ ಇವೆರಡೂ ಪುರುಷರ ಕೈಯಲ್ಲಿ ಇರುವಾಗ ಮಹಿಳೆಯರು ತಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳಲು ಹೆಚ್ಚಿನದೇನನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಈ ಅಸಮಾನತೆ ಪರಿವಾರ ನಿಯೋಜನೆಯನ್ನು ಕೂಡಾ ತಟ್ಟುತ್ತದೆ. ಹಲವು ದೇಶಗಳಲ್ಲಿ ಮಹಿಳೆಯರು ತಮ್ಮ ಪರಿವಾರಗಳನ್ನು ಚಿಕ್ಕದಾಗಿ ಇಟ್ಟುಕೊಳ್ಳಲು ಬಯಸುವುದು ಹಾಗೂ ಅವರ ಗಂಡಂದಿರು ಅವರ ವಿರುದ್ಧ ಇರುವುದು ಹಲವು ಅಧ್ಯಯನಗಳಿಂದ ಕಂಡುಬಂದಿದೆ. ಮಕ್ಕಳು ಹೆಚ್ಚಿಗಿದ್ದರೆ ಆರ್ಥಿಕ ಸಾಮರ್ಥ್ಯವು ಹೆಚ್ಚಾಗಿರುತ್ತದೆ ಎಂಬ ಗಂಡನ ಯೋಚನೆ, ಹಾಗೂ ಮಕ್ಕಳನ್ನು ಹೆರುವ ಮತ್ತು ಬೆಳೆಸುವ ಭಾರದ ಬಗ್ಗೆ ಹೆಂಡತಿ ಇಡುವ ಹೆಚ್ಚಿನ ಗಮನ, ಇವೇ ಇಂತಹ ತದ್ವಿರುದ್ಧ ಯೋಚನಾಕ್ರಮಗಳಿಗೆ ಕಾರಣವಾಗಿರಬಹುದು. ಆದರೆ ಹಲವು ಬಾರಿ ಇದು ತಂದೆತನದ ಬಗ್ಗೆ

ಬದುಕಿನ ಸಾಂಪ್ರದಾಯಿಕ ಅಭಿಪ್ರಾಯದ ಅಭಿವ್ಯಕ್ತಿಯೇ ಆಗಿರುತ್ತದೆ. ಆದರೆ ತಾಯಿಯಾದವರು ಇದನ್ನು ಒಪ್ಪಿಕೊಳ್ಳುತ್ತಾರೆ ಎಂದೇನಲ್ಲ. ಎಲ್ಲಿಯವರೆಗೆ ಮಕ್ಕಳ ಬಗ್ಗೆ ಕಾಳಜಿ ತೆಗೆದುಕೊಳ್ಳುವ ಜವಾಬ್ದಾರಿ ಮಹಿಳೆಯರ ಮೇಲೆಯೇ ಇರುತ್ತದೆಯೋ, ಅಲ್ಲಿಯವರೆಗೆ ಪರಿವಾರದ ಗಾತ್ರವನ್ನು ನಿರ್ಧರಿಸುವಲ್ಲಿ ಅವರ ಅಭಿಪ್ರಾಯಕ್ಕೇ ಹೆಚ್ಚಿನ ಬಲವಿರಬೇಕು.

ಈ ಎಲ್ಲಾ ಕ್ಷೇತ್ರಗಳಲ್ಲಿ ಬದಲಾವಣೆಯನ್ನು ತರುವಲ್ಲಿ ಸರ್ಕಾರಗಳಿಗೆ, ಶಿಕ್ಷಣ ತಜ್ಞರಿಗೆ ಹಾಗೂ ಅಭಿಪ್ರಾಯ ರೂಪಿಸುವವರಿಗೆ ಹೆಚ್ಚಿನ ಜವಾಬ್ದಾರಿ ಇದೆ. ಅಂತರರಾಷ್ಟ್ರೀಯ ಕಾರ್ಯಕ್ರಮಗಳು ಈಗಾಗಲೇ ಅಸ್ತಿತ್ವದಲ್ಲಿವೆ. ಆದರೆ ಬಹಳಷ್ಟು ಸರ್ಕಾರಗಳಂತೆ, ಈ ಕಾರ್ಯಕ್ರಮಗಳ ಬಗ್ಗೆ ಜವಾಬ್ದಾರಿಯಿರುವ ಅಂತರರಾಷ್ಟ್ರೀಯ ಸಂಘಟನೆಗಳಂತೆ, ಸಂಯುಕ್ತ ರಾಷ್ಟ್ರ ಸಂಘದ ಸಂಸ್ಥೆಗಳು ಕೂಡಾ ಪುರುಷ ಪ್ರಧಾನವೇ ಆಗಿವೆ. ಈ ಸಂಸ್ಥೆಗಳಲ್ಲಿ ಅತ್ಯಂತ ಕಡಿಮೆ ಮಹಿಳೆಯರು ಕೆಲಸ ಮಾಡುತ್ತಾರೆ. ಇದರಿಂದಾಗಿ ಈ ಸಂಸ್ಥೆಗಳು ಇನ್ನಿತರ ಕಡೆಗಳಲ್ಲಿರುವ ಮಹಿಳೆಯರನ್ನು ತಲುಪುವುದು ಕಷ್ಟವಾಗುತ್ತದೆ. ಅಂತರರಾಷ್ಟ್ರೀಯ ಮಹಿಳಾ ವರ್ಷ 1975ರ ಬಗ್ಗೆ ಮಾಸ್ಕೋದಲ್ಲಿ ಆದ ಸಂಯುಕ್ತ ರಾಷ್ಟ್ರ ಸಂಘದ ಸಮ್ಮೇಳನ ಎಲ್ಲಾ ಸಮಸ್ಯೆಗಳ ಬಗ್ಗೆ ಗಮನ ಸೆಳೆಯಲು ಪ್ರಯತ್ನಿಸಿದೆ. ಆದರೆ ಈ ಬಗ್ಗೆ ಇನ್ನೂ ಹೆಚ್ಚಿನ ಪ್ರಯತ್ನಗಳು ಆಗಬೇಕಾಗಿವೆ.

●

## ಕಣ್ಣು

ಸುಂದರ ಕಣ್ಣಿನ ಬಗ್ಗೆ ಆಗೋಂದು ಈಗೊಂದು
ದಕ್ಕಿದ ಸಂಗತಿ ಹೇಳಲೇ
ಬೇಕು ಅನ್ನಿಸಿದೆ ಅದರ ತದ್ರೂಪ
ಘನವಾಗಿ ಗೋಚರಿಸದ ಕಾರಣ ಮತ್ತೊಂದೆರಡು
ಮಾತು ಸೇರಿಸಬೇಕೆನಿಸಿದೆ, ಅಂದರೆ

ಕಣ್ಣು ನಿಜವಾಗುವ ದಪ್ಪ ಹುಬ್ಬು
ಅದು ಬಾಗಿ ನೋಡುವ ಪೊತ್ತೆ
ಮೀಸೆಯ ನಿಮಿರು ರೊಣೆ ಮೂಗಿನ
ಎಡಬಲ ಉರಿವ ತುದಿ

---

ಆರ್. ಡಿ. ಹೆಗಡೆ, ಮನೆ ನಂ. 11, ಅರ್ಕನಾಥ ರಸ್ತೆ, ಕೆ. ಆರ್. ನಗರ
[ಮೈಸೂರು ಜಿಲ್ಲೆ] 571 602

ಸಿಗರೇಟಿದ್ದರೆ ಮೊಳೆಗಣ್ಣಲ್ಲಿ ಹೊಗೆಯೋಪಾದಿ
ಅಷ್ಟಿರಲಿ, ಛಂದದ ಪ್ರಶ್ನೆ
ಕನ್ನಡಿ ಖಾತ್ರಿಮಾಡಿದೆ ಅನ್ನುವಾಗ
ನೋಡುವುದು ನೇರ ಮೂಗಿನ ಮೂಲಕ
ಎದೆಮುಟ್ಟಿ ಒಳಹೊಕ್ಕಿದಂತೆ
ಗ್ರಹಿಸುವುದು ತನ್ನಂತೆ
ನಿಜದ ರೂಪಕ್ಕೆ ಚಿನ್ನದ ತಟ್ಟೆ ಬೋರಲಿಟ್ಟು
ಕಣ್ಣಿನ ಹೊರರೇಖೆ ಆಕಾರ ಗಮನ ಏನೇ ಇರಲಿ,
ಪರಿಪುಷ್ಟ ಕಂಡದ್ದು ಕಣ್ಣೊಳಗೆ ಹೂಕೊಂಡಾಗ
ಓ.ಟಿ.ಯ ಗಾಲಿಯ ಸ್ಟ್ರೆಚರಿನಂತ ಉದ್ದ ಬಾಂಕಿನಥರದ ಮೇಜಿಗಂಗಾತವಾದಾಗ

ಸುತ್ತ ಕುಶಲ ಸೂಜಿಯ ಮೂರು ಬೊಟ್ಟೂರಿದಾಗ
ಮೊದಲಬಾರಿಗೆ ಎವೆಯಿಕ್ಕದೆ ಹುಬ್ಬು ಕೊಂಕಿಸದೆ ಸದ್ಗೃಹಸ್ಥನಾಗಿ
ನೋವಿಲ್ಲದ ನೀರಿಲ್ಲದ ಗುರಿಯಿಲ್ಲದ ನಿರ್ದಯಿಯಾಗಿ, ಆಗ
ಒಂದೇ ಕೊಂಬೆಯ ಮೇಲೆ ಎರಡು ಹಕ್ಕಿಗಳು
ಒಂದು ನೋಡುವುದೊಂದು ತಟಸ್ಥ,
ಸೀಳುವ ಸದ್ದಿನ ಮೌನದ ತಲ್ಲಣದಲ್ಲಿ
ಬಿಚ್ಚಿಕೊಳ್ಳುವ ಸ್ತಬ್ಧ ನೆನಪುಗಳು
ತಾಜಾ ಉದಾರತೆಯಿಂದ ಆಶ್ರಯಿಸುತ್ತವೆ,
ರೆಕ್ಕೆ ಬಡಿಯುತ್ತವೆ ಹಕ್ಕಿಗಳು
ಹೊಸ ಬದುಕಿಗಾಗಿ



—ಆರ್. ಡಿ. ಹೆಗಡೆ

## ಒಂದು ಸರಳ ರೇಖೆಗಾಗಿ

ಒಂದು ರೇಖೆಗಾಗಿ ; ಬರಿ ಒಂದು ಸರಳ ರೇಖೆಗಾಗಿ,
ವ್ಯರ್ಥವಾಗಿ ; ನನ್ನ ತಲೆ ಕೆರೆದುಕೊಳ್ಳುತ್ತಲಿದ್ದೇನೆ
ಈ ಜಗತ್ತಿನಲ್ಲೆಲ್ಲಿಯೂ ಒಂದು ಸರಳ ರೇಖೆಯೇ ಕಾಣುತ್ತಿಲ್ಲ.

ಆಕಾಶವೋ ? ಅಪರಾಜಿತ ಪುಷ್ಪದಂತೆ
ನೀಲವರ್ಣಮಯವಾಗಿದೆ. ಆದರೆ ಅದೂ ಗೋಲಾಕಾರವೇ.
ನದಿಗಳು ಡೊಂಕಾಗಿವೆ. ಪರ್ವತಗಳಿಗೆ ಏರಿಳಿತಗಳಿವೆ.
ಸರೋವರಗಳು ಸಪಾಟಾಗಿವೆ.

---

ಅನು : ಸಿದ್ಧಲಿಂಗ ದೇಸಾಯಿ, ಮುಮ್ಮಿಗಟ್ಟಿ, ಧಾರವಾಡ-581 203

ಸಮುದ್ರ ದಂಡೆಗಳಂತೂ ಹಾವು ಹಾಯ್ದು ಹೋದಂತೆ
ಅಂಕುಡೊಂಕಾಗಿ ಹರಿದಿವೆ.

ಸಾರಂಗದ ಕೋಡುಗಳು ಡೊಂಕು,
ನಾಯಿಯ ಬಾಲಗಳು ಡೊಂಕು,
ಆಕಳ ಕಾಲಿನ ಖುರಪುಟಗಳೂ ಸಹ
ಕವಲೊಡೆದಿರುತ್ತವೆ.
ಗ್ರ್ಯಾಂಡ್‌ಟ್ರಂಕ್ ರೋಡೂ ಸಹ
ಅಂಕುಡೊಂಕಾಗಿ ಬಿದ್ದಿದೆ.

ಬಹುಶಃ ಇನ್ನೂ ಈ ಭೂಮಿಯ ಮೇಲೆ
ಒಂದೂ ಸರಳ ರೇಖೆಯೇ ಹುಟ್ಟಿಲ್ಲವೆಂದು ಕಾಣುತ್ತದೆ.
ಯಾವ ವ್ಯಕ್ತಿಯೂ ಸರಳಿಲ್ಲ.
ಹೀಗಾಗಿ ಮನುಷ್ಯರನ್ನು ಅರ್ಥೈಸುವುದೇ ಕಷ್ಟವಾಗಿಬಿಟ್ಟಿದೆ.

ನಮ್ಮ ನೆತ್ತಿಯ ಮೇಲೆ ಕೆಂಪು ದಾಸ್ವಾಳ ಹೂವಿನಂತೆ
ನೇತಾಡುವ ಸೂರ್ಯನಾದರೂ ಸರಳ ರೇಖೆಯಲ್ಲಿ
ಚಲಿಸುತ್ತಾನೆಂದರೆ :
ಕುಡಿದು ಉನ್ಮತ್ತನಾದವನಂತೆ
ಉತ್ತರಾಯಣದಿಂದ ದಕ್ಷಿಣಾಯನದ ನಡುವೆ
ಜೋಲಿ ಹೊಡೆಯುತ್ತಾನೆ.

ನನಗೆ ತಿಳಿದಂತೆ ಯಾವುದೂ ಸೀದಾ ಸಾದಾ ಸರಳು,
ಇಲ್ಲವೇ ಇಲ್ಲವೆಂದೆನಿಸುತ್ತದೆ.

ನಿನ್ನ ಕಣ್ಣಿನ ಸಂಜ್ಞಾ ಭಾಷೆಯೂ ಕೂಡ
ನನ್ನ ಹೃದಯಕ್ಕೆ ತಲುಪುವುದರೊಳಗೆ
ಅದ್ಹೇಗೋ ವಕ್ರವಾಗಿಯೇ ಬಿಟ್ಟಿರುತ್ತದೆ.
ನನ್ನ ನೇರ ಆಸೆಯೂ ಕೂಡ ಸಂಕೋಚದಿಂದ
ಬೇರೆಡೆಗೆ ವಾಲಿಬಿಟ್ಟಿರುತ್ತದೆ
ನಾವು ಕಾಯುತ್ತಲೇ ಇದ್ದೇವೆ.
ಕೇವಲ ಒಂದು ಸರಳ ರೇಖೆಗಾಗಿ

ಬಂಗಾಲಿ ಮೂಲ : **ಜಗನ್ನಾಥ ಚಕ್ರವರ್ತಿ**

# ನೀವು ಮತ್ತು ಅಣ್ವಸ್ತ್ರ

—ಜಾರ್ಜ್ ಆರ್ವೆಲ್

[ಜಾರ್ಜ್ ಆರ್ವೆಲ್ ಎಂದೇ ಇಂಗ್ಲೀಷ್ ಸಾಹಿತ್ಯ ಪ್ರಪಂಚದಲ್ಲಿ ಪ್ರಖ್ಯಾತನಾದ ಎರಿಕ್ ಆರ್ಥರ್ ಬ್ಲೈರ್ (1903–1950), ಜಾನ್ ಎರ್ಸ್‌ಕಿನ್ ಅಭಿಪ್ರಾಯ ಪಡುವಂತೆ "ತನ್ನ ಅನನ್ಯತೆಯನ್ನು ತನ್ನ ವೈಚಾರಿಕ ಬುದ್ಧಿ ಶಕ್ತಿ ಮತ್ತು ಸಾಮಾನ್ಯನ ಭಾವನೆಗಳನ್ನು ಒಂದು 'ವ್ಯವಸ್ಥಿತ ಹದ'ದಲ್ಲಿ ಬಳಸುವುದರಲ್ಲೇ ಕಾಯ್ದುಕೊಂಡಿದ್ದಾನೆ.''

ಪ್ರಸ್ತುತ ದಿನಗಳಲ್ಲಿ ಅಣ್ವಸ್ತ್ರ ನಿಷೇಧ–ವಿಶ್ವಶಾಂತಿ ಎಂಬಿತ್ಯಾದಿ ಆಣಿಮುತ್ತುಗಳನ್ನು ಪದೇ ಪದೇ ಚೆಲ್ಲುತ್ತ–ಏನಕೇನ ಪ್ರಕಾರೇಣ ಪ್ರಸಿದ್ಧ ಪುರುಷರಾಗಲು ಹೊರಟು, ಮತ್ತೆ ಅಂಥ ಮಾರಕಾಸ್ತ್ರಗಳೊಂದಿಗೇ ಚೆಲ್ಲಾಟಕ್ಕೆ ಇಳಿಯುತ್ತಿರುವವರಿಗೆ ಪ್ರಸ್ತುತ ಪ್ರಬಂಧ ಸಾಕಷ್ಟು ತಿಳಿವಳಿಕೆ ಮತ್ತು ಎಚ್ಚರಿಕೆಯನ್ನು ನೀಡುತ್ತದೆ. 19 ಅಕ್ಟೋಬರ್ 1945ರಷ್ಟು ಹಿಂದೆಯೇ 'ಟ್ರಿಬ್ಯೂನ್' ಪತ್ರಿಕೆಯಲ್ಲಿ ಪ್ರಕಟವಾದ ಅವನ ಈ ಲೇಖನ ಇಂದೂ ಕೂಡ ತನ್ನ ಪ್ರಖರ ವೈಚಾರಿಕ-ದಾರ್ಶನಿಕ ನೋಟದಿಂದ ಪ್ರಸ್ತುತವೆನಿಸುತ್ತದೆ.]

ಇನ್ನೊಂದು ಐದು ವರ್ಷಗಳಲ್ಲಿ ಅಣ್ವಸ್ತ್ರದಿಂದಾಗಿ ನಾವೆಲ್ಲ ಚೂರು ಚೂರಾಗಿ ಬೀಳಬಹುದೆಂದು ತಿಳಿದು ನೋಡಿದಾಗ, ಅಣ್ವಸ್ತ್ರದ ಕುರಿತಾದ ಚರ್ಚೆ ನಾವು ಆಶಿಸಿದಷ್ಟು ಪ್ರಮಾಣದಲ್ಲಿ ಇನ್ನೂ ನಡೆದಿಲ್ಲ. ಪತ್ರಿಕೆಗಳೇನೋ ಈ ಕುರಿತು ಅನೇಕ ಸಚಿತ್ರ ವರದಿಗಳನ್ನು ನೀಡಿದಾಗ್ಯೂ ಅವುಗಳ ಪ್ರಭಾವ ಶ್ರೀಸಾಮಾನ್ಯನನ್ನು ಅಷ್ಟಾಗಿ ತಟ್ಟಲೇ ಇಲ್ಲ. ಪ್ರೋಟಾನ್–ನ್ಯೂಟ್ರಾನ್‌ಗಳ ಕುರಿತು ಮಾತನಾಡುವುದೂ ಅರ್ಥವಾಗದ್ದೇ. ಅಷ್ಟೇ ಅಲ್ಲ, ಅಣ್ವಸ್ತ್ರಗಳನ್ನು ಅಂತರ್‌ರಾಷ್ಟ್ರೀಯ ಹಿಡಿತದಲ್ಲಿಡ ಬೇಕೆಂಬ ಮಾತು ಕೂಡ ಅರ್ಥಹೀನವಾದದ್ದೇ. ಈ ಅಣ್ವಸ್ತ್ರಗಳ ತಯಾರಿಕೆ ಎಷ್ಟು ಕಷ್ಟ? ಎಂಬ ಬಗ್ಗೆ ಏನನ್ನೂ ಅಷ್ಟಾಗಿ ಅಚ್ಚಿನಲ್ಲಿ ನೀಡದ್ದು ತುಂಬ ತಮಾಷೆಯ ಸಂಗತಿಯೇ ಸರಿ.

ಆ ಕುರಿತು ಮಹಾಜನತೆ ತಿಳಿವಳಿಕೆ ಪಡೆಯಬಹುದಾದ್ದು ಬಳಸುದಾರಿಯ ಮುಖಾಂತರ ಮಾತ್ರ. ರಷ್ಯಾಕ್ಕೆ ಇದರ ಬಗೆಗಿನ ಕೆಲವೊಂದು ರಹಸ್ಯವನ್ನು ತಲುಪಿಸಬಾರದೆಂಬ ಅಧ್ಯಕ್ಷ ಟ್ರಾಮನ್‌ರ ನಿರ್ಧಾರದ ಹಿಂದಿರುವ ಕಾಳಜಿಯ ಮುಖಾಂತರ. ಈಗ್ಗೆ ಕೆಲವು ತಿಂಗಳಿಗಳಿಗೂ ಹಿಂದೆ, ಅಣ್ವಸ್ತ್ರ ಇನ್ನೂ ಗಾಳಿಮಾತಾಗಿ ಉಳಿದಿದ್ದಾಗ, ಎಲ್ಲೆಡೆಗೆ ಹಬ್ಬಿದ್ದ ನಂಬಿಕೆ ಏನೆಂದರೆ ಅಣುವನ್ನು ಒಡೆಯುವುದೇ

ಕನ್ನಡಕ್ಕೆ : ರವೀಂದ್ರ ಭಟ್ಟ ಕುಳಿಬೀಡು, ಇಂಗ್ಲೀಷ್ ಉಪನ್ಯಾಸಕ, ಸರಕಾರಿ ಪ್ರಥಮ ದರ್ಜೆ ಕಾಲೇಜು, ಮುಂಡಗೋಡ, ಉತ್ತರ ಕನ್ನಡ ಜಿಲ್ಲೆ–581349

ಭೌತವಿಜ್ಞಾನಿಗಳಿಗೊಂದು ತೊಂದರೆಯಾಗಿದೆ. ಅವರು ಆ ತೊಂದರೆಯೊಂದನ್ನು ಪರಿಹರಿಸಿಕೊಂಡರೆ, ಹೊಸ, ಸಂಪೂರ್ಣ ವಿನಾಶಕಾರಿ ಅಸ್ತ್ರವೊಂದನ್ನು ಎಲ್ಲರೂ ಸುಲಭವಾಗಿ ಹೊಂದಬಹುದು. ಯಾವುದೇ ಕ್ಷಣದಲ್ಲಿ ತಲೆಕೆಟ್ಟವನೊಬ್ಬ ತನ್ನ ಪ್ರಯೋಗ ಶಾಲೆಯಲ್ಲೇ ಕುಳಿತು ಇಡೀ ನಾಗರೀಕ ಪ್ರಪಂಚವನ್ನೇ ಧ್ವಂಸಗೊಳಿಸ ಬಹುದಾದ್ದು ಎಷ್ಟು ಸುಲಭವೆಂದರೆ, ಮಕ್ಕಳು ಪಟಾಕಿ ಹಚ್ಚಿದಷ್ಟು ಸುಲಭವಾಗಿ ಎಂಬ ಗಾಳಿ ಸುದ್ದಿಯೊಂದು ಹಬ್ಬಿತ್ತು.

ಅದು ನಿಜವೇ ಆಗಿದ್ದಲ್ಲಿ, ಇಡೀ ಇತಿಹಾಸದ ಗತಿಯನ್ನೇ ದಿಢೀರನೆ ಬದಲಿಸ ಬಹುದಿತ್ತು. ಬೃಹತ್ ಮತ್ತು ಚಿಕ್ಕರಾಷ್ಟ್ರಗಳ ನಡುವಿನ ಅಂತರ ಅಳಿಸಿ ಹೋಗ ಬಹುದಿತ್ತು, ವ್ಯಕ್ತಿಯ ಮೇಲೆ ಇರುವ ರಾಷ್ಟ್ರದ ಹಿಡಿತ ದುರ್ಬಲವಾಗಬಹುದಿತ್ತು. ಆದರೆ ಅಧ್ಯಕ್ಷ ಟ್ರೂಮನ್‌ರ ಹೇಳಿಕೆ ಮತ್ತಿತರ ಹೇಳಿಕೆಗಳಿಂದ ನಮಗೆ ಸ್ಪಷ್ಟವಾಗುವುದೇ ನೆಂದರೆ ಇದರ ತಯಾರಿಕೆ ಬಹಳ ತುಟ್ಟಿಯಾದದ್ದು ಮತ್ತು ಬಹಳಷ್ಟು ಯಾಂತ್ರಿಕ ಪ್ರಯತ್ನಗಳನ್ನು ಬಯಸುವಂಥಾದ್ದು. ಹೀಗಾಗಿ ಪ್ರಪಂಚದ ಕೇವಲ ಮೂರು ಅಥವಾ ನಾಲ್ಕು ರಾಷ್ಟ್ರಗಳು ಮಾತ್ರ ಇದನ್ನು ಉತ್ಪಾದಿಸಲು ಶಕ್ತವಾಗಿವೆ. ಇದರಿಂದ ವ್ಯಕ್ತವಾಗುವುದೇನೆಂದರೆ, ಇದು ಇತಿಹಾಸದ ಗತಿಯನ್ನು ಬದಲಿಸುವುದಕ್ಕೆ ಬದಲಾಗಿ, ಈಗ ಮುಂದುವರಿಯುತ್ತಿರುವ ಪ್ರವೃತ್ತಿಯನ್ನೇ ಮತ್ತಷ್ಟು ಚುರುಕು ಗೊಳಿಸಬಹುದೆಂದು ಹನ್ನೆರಡು ವರ್ಷಗಳ ಹಿಂದೆಯೇ ಸ್ಪಷ್ಟವಾಗಿ ಕಾಣಬಹುದಿತ್ತು.

ಸಾಮಾನ್ಯವಾಗಿ, ನಾಗರೀಕತೆಯ ಇತಿಹಾಸವೆನ್ನುವುದು ಶಸ್ತ್ರಗಳ ಇತಿಹಾಸವೇ ಆಗಿದೆ. ಕೋವಿ ಮದ್ದಿನ ಸಂಶೋಧನೆಗೂ, (ಮಧ್ಯಯುಗದ) ಸಾಮ್ರಾಜ್ಯಶಾಹಿ ಮತ್ತು ಮೇಲ್ವರ್ಗದ ಅವನತಿಗೂ ನಡುವಿನ ಸಂಬಂಧವನ್ನು ವಿಶೇಷವಾಗಿ ಈ ಕುರಿತು ಪ್ರಸ್ತಾಪಿಸಲಾಗುತ್ತಿದೆ. ಇದಕ್ಕೆ ಅಪವಾದವನ್ನು ಮುಂದೊಡ್ಡಬಹುದು ಎಂಬುದರ ಬಗ್ಗೆ ನನಗೆ ಅನುಮಾನಗಳಿಲ್ಲ, ಆದರೂ ಈ ಕೆಳಗಿನ ನಿಯಮಗಳು ಸಾಮಾನ್ಯವಾಗಿ ನಿಜ—ಆಯುಧಗಳ ಉತ್ಪಾದನೆ ದುಬಾರಿ ಮತ್ತು ಕಠಿಣವಾದ ಯುಗದಲ್ಲಿ ಅದು 'ನಿರಂಕುಶ' ಆಳ್ವಿಕೆಗೆ ಅನುವುಮಾಡಿಕೊಡುತ್ತದೆ. ಯಾವಾಗ ಈ ಆಯುಧಗಳು ಅಗ್ಗ ಮತ್ತು ಸುಲಭವಾಗಿರುತ್ತದೋ (ದೊರಕುತ್ತದೋ) ಆಗ ಜನಸಾಮಾನ್ಯರೂ ಕೂಡ ಅದನ್ನು ಬಳಸುವ ಅವಕಾಶವನ್ನು ಪಡೆಯುತ್ತಾರೆ. ಹೀಗೆ ಉದಾಹರಣೆಗೆ, ಟ್ಯಾಂಕ್ ಯುದ್ಧನೌಕೆಗಳು, ಬಾಂಬೆಸೆಯುವ ವಿಮಾನಗಳು ಅವುಗಳೊಳಗೇ 'ದ್ವೈತತೆ'ಯನ್ನಳ ವಡಿಸಿಕೊಂಡಂಥವು. ಅದೇ ಕೈಕೋವಿ, ಕೈಬಾಂಬುಗಳು, ಬಾಣಗಳು ಎಲ್ಲ 'ಪ್ರಜಾ ಪ್ರಭುತ್ವ'ವನ್ನೊಳಗೊಂಡ ಆಯುಧಗಳು. ಸಂಕೀರ್ಣವಾದ ಆಯುಧ ಬಲಶಾಲಿ ಗಳನ್ನು ಇನ್ನಷ್ಟು ಬಲಶಾಲಿಗಳನ್ನಾಗಿಸುತ್ತದೆ–ಅದೇ ಸರಳವಾದ ಆಯುಧ–ದುರ್ಬಲ ರಿಗೂ 'ಹಿಡಿತ'ವನ್ನೊದಗಿಸುತ್ತದೆ.

ಪ್ರಜಾಪ್ರಭುತ್ವದ ಮೌಲಿಕ ಯುಗ ಮತ್ತು ರಾಷ್ಟ್ರೀಯ ಸ್ವಯಂ ನಿರ್ಧರಿತ ವ್ಯವಸ್ಥೆಯ ಯುಗ ಕೋವಿ–ಮದ್ದು–ಗುಂಡುಗಳಷ್ಟೇ ಇರುವ ಕಾಲ. ಕೈಕೋವಿ (Flintlock)ನ ಸಂಶೋಧನೆಯ ಅನಂತರ ಮತ್ತು percussion cap ನ ಸಂಶೋಧನೆಯ ಪೂರ್ವದಲ್ಲಿ, ಕೋವಿ ಸಾಕಷ್ಟು ಶಕ್ತಿಶಾಲಿ ಆಯುಧವಾಗಿತ್ತು. ಇದು ಸರಳವಾಗಿದ್ದು ಯಾರು ಎಲ್ಲಿ ಬೇಕಾದರೂ ಉತ್ಪಾದಿಸಬಹುದಿತ್ತು. ಇದರಿಂದಾಗಿಯೇ ಅಮೇರಿಕಾ ಮತ್ತು ಫ್ರೆಂಚ್ ಕ್ರಾಂತಿಯಲ್ಲಿ ಯಶಸ್ಸು ಸಾಧ್ಯವಾಯಿತು ಮತ್ತು ಪ್ರಸ್ತುತ ದಿನಗಳಿಗಿಂತ ಹೆಚ್ಚು ಜನಪ್ರಿಯವಾಗಿ, ದಬ್ಬಾಳಿಕೆಯನ್ನು ಹತ್ತಿಕ್ಕಲು ಸಾಧ್ಯವಾಯಿತು. ತೋಪಿನ ಕೋವಿಯ ಅನಂತರ ಕಾಡುತೋಸು ಬಂತು. ಇದು ತೌಲನಿಕವಾಗಿ ಸಂಕೀರ್ಣ ಆಯುಧ. ಆದರೂ ಬಹಳಷ್ಟು ರಾಷ್ಟ್ರಗಳು ಇದನ್ನು ಉತ್ಪಾದಿಸಬಹುದು. ಇದು ಅಗ್ಗವಷ್ಟೇ ಅಲ್ಲ–ಸುಲಭವಾಗಿ ಸಾಗಾಣಿಕೆಗೆ ಸಾಧ್ಯ ಮತ್ತು ಇದರಿಂದ ಹಿಡಿಮದ್ದಿನ ಮಿತಬಳಕೆ ಕೂಡ ಸಾಧ್ಯ. ಅತಿ ಹಿಂದುಳಿದ ರಾಷ್ಟ್ರಗಳು ಕೂಡ ಕೋವಿಗಳನ್ನು ಒಂದಲ್ಲ ಒಂದು ರೀತಿಯಿಂದ ಹೊಂದಬಹುದಾಗಿದೆ. ಹಾಗಾಗಿ ಬಲ್ಗೇರಿಯಾ, ದಕ್ಷಿಣ ಆಫ್ರಿಕಾ, ಇಥಿಯೋಪಿಯಾ, ಮೊರಾಕ್ಕೊ–ಟಿಬೇಟಿಯನ್ನರೂ ಸಹ ತಮ್ಮ ಸ್ವಾತಂತ್ರ್ಯಕ್ಕಾಗಿ ಇದನ್ನು ಬಳಸಬಹುದು, ಮತ್ತು ಕೆಲವೊಮ್ಮೆ ಇದರಿಂದ ಗೆಲ್ಲಲೂ ಬಹುದು ! ಆದರೆ ಅನಂತರದ ದಿನಗಳಲ್ಲಿ ಯುದ್ಧ ಕೌಶಲ್ಯದಲ್ಲಿ ಆದ ಬೆಳವಣಿಗೆ ರಾಷ್ಟ್ರಗಳಿಗೆ ಬಲ ತುಂಬಿ ವ್ಯಕ್ತಿಗಳನ್ನು ದುರ್ಬಲರನ್ನಾಗಿಸಿತು ಮತ್ತು ಯಾಂತ್ರಿಕವಾಗಿ ಮುಂದುವರಿದ ರಾಷ್ಟ್ರಗಳಷ್ಟೇ ಪ್ರಬಲವಾಗುತ್ತ ಸಾಗಿದವು. ಹಿಂದುಳಿದವು ಹಿಂದೆಯೇ ಉಳಿದವು. ಕೆಲವೇ 'ಶಕ್ತಿ ಕೇಂದ್ರ'ಗಳು ಉಳಿದವು. 1939ರ ಹೊತ್ತಿಗೆ ಕೇವಲ ಐದು ರಾಷ್ಟ್ರಗಳು ಬೃಹತ್ ಪ್ರಮಾಣದಲ್ಲಿ ಯುದ್ಧ ಸಾರುವ ಶಕ್ತಿ ಪಡೆದಿದ್ದರೆ ಈಗ ಕೇವಲ ಮೂರು ರಾಷ್ಟ್ರಗಳು–ಮುಂದೆ ಕೇವಲ ಎರಡೇ ರಾಷ್ಟ್ರಗಳು ಈ ಶಕ್ತಿಯನ್ನು ಹೊಂದಬಹುದು. ಈ ಬೆಳವಣಿಗೆ ಇತ್ತೀಚಿನ ವರ್ಷಗಳಲ್ಲಿ ಸ್ಪಷ್ಟವಾಗುತ್ತಿದೆ. 1914ಕ್ಕೆ ಮುನ್ನವೇ ಕೆಲವು ದ್ರಷ್ಟಾರರು ಇದನ್ನು ಮನಗಂಡಿದ್ದರು. ಔದ್ಯೋಗಿಕ ಶಕ್ತಿಯನ್ನು ಬಳಸಿಕೊಳ್ಳದೇ ಯಾವುದಾದರೊಂದು ಬಗೆಯಲ್ಲಿ ಹೊಸ ಆಯುಧಗಳನ್ನು ತಯಾರಿಸುವುದಕ್ಕೆ ಸಾಧ್ಯವಿದ್ದಲ್ಲಿ ಮಾತ್ರ ಈ ಇತಿಹಾಸದ ಗತಿಯನ್ನು ಬದಲಾಯಿಸಬಹುದು.

ಅನೇಕ ನಂಬಲರ್ಹ ಮೂಲ–ಮತ್ತು ಲಕ್ಷಣಗಳಿಂದ ಅಣುಶಕ್ತಿಯನ್ನು ಉತ್ಪಾದಿಸುವ ರಹಸ್ಯವನ್ನು ರಶಿಯನ್ನರಿನ್ನೂ ಪಡೆದಿಲ್ಲ ಎನ್ನಬಹುದಾದಾಗಿದ್ದರೂ, ಇನ್ನು ಕೆಲವೇ ವರ್ಷಗಳಲ್ಲಿ ಅವರು ಅಂಥ ರಹಸ್ಯವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ. ಹಾಗಾಗಿ ನಮ್ಮೆದುರಿಗೆ ಈಗ ಎರಡು–ಮೂರು ದೈತ್ಯ ಶಕ್ತಿಶಾಲಿ ರಾಷ್ಟ್ರಗಳಿದ್ದು ಅವುಗಳ ಅಣುಶಕ್ತಿ ಸಾಮರ್ಥ್ಯದಿಂದ ಮಿಲಿಯಗಟ್ಟಲೆ ಜನರನ್ನು ಕೆಲವೇ ಸೆಕೆಂಡುಗಳಲ್ಲಿ ಒರೆಸಿ ಹಾಕಿ ಬಿಡಬಹುದು.

ತನ್ಮೂಲಕ ಪೂರ್ಣ ಪ್ರಪಂಚವನ್ನು ಅವೇ ಹರಡಿಕೊಳ್ಳಬಹುದು–ಪೂರ್ಣ ಪ್ರಮಾಣದ ರಕ್ತಪಾತವಾಗಬಹುದು–ಬಹುಶಃ ನಾಗರೀಕತೆಯು ನಿಜವಾದ ಅಂತವೂ ಆಗಬಹುದು. ಅವಸರದಲ್ಲಿ ಹೀಗೆಂದರೆ ಮಹಾಯುದ್ಧ ಬಹುಶಃ ಯಂತ್ರಯುಗವನ್ನೇ ನಿಜಕ್ಕೂ ಅಂತಗೊಳಿಸಬಹುದು. ಒಂದೊಮ್ಮೆ ಹೀಗಾದರೆ–ಮತ್ತು ನಿಜವಾಗಿಯೂ ಇದೇ ಬಗೆಯ ಬೆಳವಣಿಗೆ–ಬದುಕಿ ಉಳಿಯುವ ಬಲಶಾಲಿ ರಾಷ್ಟ್ರಗಳು ಪರಸ್ಪರ ಅಣ್ವಸ್ತ್ರಗಳನ್ನು ಬಳಸಬಾರದೆಂಬ ಸಾಮಾನ್ಯ ತಾತ್ವಿಕ ಒಪ್ಪಿಗೆಗೆ ಕಾರಣವಾಗಿರಬಹುದು. ಹಾಗಲ್ಲದೆ ಅಶಕ್ತರ ವಿರುದ್ಧ ಮಾತ್ರ ಬಳಸಿದರೆ ಅಥವಾ ಅವರಿಗೆ ಬೆದರಿಕೆ ಹುಟ್ಟಿಸಿದರೆ, ಆಗ ನಾವು ಬಹಳ ಹಿಂದಿನ ಸ್ಥಿತಿಗೇ ಮರಳುತ್ತೇವೆ. ಒಂದೇ ವ್ಯತ್ಯಾಸವೆಂದರೆ 'ಶಕ್ತಿ' ಕೇವಲ ಕೆಲವರ ಹಸ್ತಕ್ಕೆ ಸೀಮಿತವಾಗಿರುತ್ತದೆ ಮತ್ತು ಹೀಗಾದಾಗ ಅದರ ಅಧೀನ ರಾಷ್ಟ್ರಗಳ ಮತ್ತು ದುರ್ಬಲ ವರ್ಗದವರ ಸ್ಥಿತಿ ಇನ್ನಷ್ಟು ಚಿಂತಾಜನಕ ಶೋಚನೀಯ ವಾಗುತ್ತದೆ.

ಜೇಮ್ಸ್ ಬರ್ನ್‌ಹಾಮ್ (Jeemes Burnham) ದಿ ಮ್ಯಾನೇಜೀರಿಯಲ್ ರೆವಲ್ಯೂಶನ್ (The Manegerial Revolution) ಬರೆದಾಗ, ಅನೇಕ ಅಮೇರಿಕನ್ನರಿಗೆ ಅನ್ನಿಸಿದ್ದೆಂದರೆ ಬಹುಶಃ ಜರ್ಮನಿಯು ಯೂರೋಪಿನ ಯುದ್ಧದಲ್ಲಿ ಅಂತಿಮ ಜಯಶಾಲಿಯಾಗಬಹುದು. ಆದ್ದರಿಂದ ಜರ್ಮನಿಯೇ ಹೊರತೂ ರಷ್ಯಾ ಯೂರೋಪಿನ ನೆಲದ ಮೇಲೆ ಪ್ರಭುತ್ವ ಸ್ಥಾಪಿಸದು ಮತ್ತು ಅದೇ ಹೊತ್ತಲ್ಲಿ ಪೂರ್ವ ಏಷ್ಯಾದ ಪ್ರಭುತ್ವವನ್ನು ಜಪಾನ ಉಳಿಸಿಕೊಳ್ಳುತ್ತದೆ. ಹೀಗೆನ್ನುವುದು ತಪ್ಪು ಲೆಕ್ಕಾಚಾರ ಎಂದು ಸಿದ್ಧವಾದರೂ ಅವನ ಮೂಲವಾದಕ್ಕೇನೂ ಇದರಿಂದ ಚ್ಯುತಿ ಬರಲಿಲ್ಲ. ಬರ್ನ್‌ಹ್ಯಾಮನ ಹೊಸ ಜಗತ್ತಿನ ಭೌಗೋಳಿಕ ಚಿತ್ರ, ಅವನ ಸಿದ್ಧಾಂತ ದಂತೆಯೇ ಆಗಿದೆ. ಮೂರು ಬಲಶಾಲಿ ರಾಷ್ಟ್ರಗಳಲ್ಲಿ ಈ ನೆಲ ಹಂಚಿ ಹೋಗುತ್ತಿರುವುದು ಹೆಚ್ಚು ಹೆಚ್ಚು ಸ್ಫುಟವಾಗುತ್ತಿದೆ. (ಪ್ರತಿಯೊಂದೂ ಸ್ವಯಂಪೂರ್ಣ ಮತ್ತು ಉಳಿದ ದೇಶಗಳಿಂದ ಬೇರೆಯಾದ ಸ್ವ-ಚುನಾಯಿತ ಅಲ್ಪಸಂಖ್ಯಾತ ಸರಕಾರದಿಂದ ಒಂದು ಅಥವಾ ಇನ್ನೊಂದು ವೇಷದಲ್ಲಿ ಜಗತ್ತನ್ನಾಳುತ್ತಿರುತ್ತವೆ. ಇವುಗಳ ಮಧ್ಯೆ ಯಾವುದು ಗಡಿ ಪ್ರದೇಶ? ಎಂಬ ಬಗ್ಗೆ ಇನ್ನೂ ಭಿನ್ನಾಭಿಪ್ರಾಯ/ಜಗಳ ಎಂದು, ಮತ್ತು ಇದು ಇನ್ನು ಕೆಲವು ಕಾಲ ಹೀಗೇ ಮುಂದುವರಿಯಬಹುದು. ಪೂರ್ವ ಏಷ್ಯಾದ ಮೇಲೆ ಪ್ರಭುತ್ವ ಉಳ್ಳ ಚೈನಾ ಇಂದಿಗೂ ಶಕ್ತಿಶಾಲಿ ಆದರೂ ಪ್ರತ್ಯಕ್ಷ ವಾಗಿಲ್ಲ. ಪ್ರತಿಯೊಂದು ಹೊಸ ವೈಜ್ಞಾನಿಕ ಆವಿಷ್ಕಾರಗಳು ಇವುಗಳಿಗೆ ವೇಗವರ್ಧಕ ವಾಗಿ ಕೆಲಸಮಾಡುತ್ತಿವೆ.

ವಿಮಾನಗಳ ಸಂಶೋಧನೆ ಹೊರ ದೇಶಗಳ ನಡುವಿನ ಗಡಿ–ಗೋಡೆಯನ್ನು ನಿರ್ನಾಮಗೊಳಿಸುತ್ತದೆ ಎಂದು ಹಿಂದೊಮ್ಮೆ ಗ್ರಹಿಸಿದ್ದಿತ್ತು, ಆದರೆ ನಿಜವಾಗಿ ವಿಮಾನದ ಆವಿಷ್ಕಾರದ ಅನಂತರ ಅವನ್ನು ಯುದ್ಧಕ್ಕೆ ಬಳಸಿ ಗಡಿ ಪ್ರದೇಶವನ್ನು

ದುರ್ಗಮವಾಗಿಸಿದೆ. ಆಕಾಶವಾಣಿಯ (ರೇಡಿಯೋ) ಆವಿಷ್ಕಾರ ಅಂತರ್‌ರಾಷ್ಟ್ರೀಯ ತಿಳಿವಳಿಕೆ ಮತ್ತು ಸಹಕಾರ ಸಾಧಿಸಬಹುದೆಂದು ಭಾವಿಸಲಾಗಿತ್ತು. ಆದರೆ ಅಂದು, ಒಂದು ರಾಷ್ಟ್ರವನ್ನು ಇನ್ನೊಂದು ರಾಷ್ಟ್ರ ಅವಮಾನಗೊಳಿಸುವ ಸಾಧನವಾಗಿ ಮಾರ್ಪಟ್ಟಿದೆ. ಅಣುಬಾಂಬ್ ಈ ಕೆಲಸವನ್ನು ಪೂರ್ಣಗೊಳಿಸಬಹುದು! ದುರ್ಬಲ ರಾಷ್ಟ್ರಗಳನ್ನು ದರೋಡೆಮಾಡಿ ಶಕ್ತಿ ಪಡೆದವು ಕ್ರಾಂತಿಗಿಳಿದು–ಅನಂತರ ಶಕ್ತಿಪಡೆದ–ಸೈನ್ಯ ಸಮಾನತೆಯ ತಳಹದಿಯ ಮೇಲೆ–ಪರಸ್ಪರ ಗೆಲ್ಲಲು ಅಸಾಧ್ಯವಾದರೂ, ತಮ್ಮೊಳಗೇ ಪ್ರಪಂಚವನ್ನ ಆಳುವುದನ್ನು ಮುಂದುವರಿಸಬಹುದು. ಇದನ್ನು ಹೇಗೆ ಬದಲಾಯಿಸಬಹುದೆಂದು ನಿಖರವಾಗಿ ಹೇಳುವುದು ಅಸಾಧ್ಯ. ನಿಧಾನವಾಗಿ ಮತ್ತು ಜನತೆಯ ಸ್ಥಿತಿ ಬದಲಾದಲ್ಲಿ ಸಾಧ್ಯ.

'ಮನುಷ್ಯ ತನ್ನ ಆಯುಧಗಳಿಂದ ತಾನೇ ಸರ್ವನಾಶಗೊಳ್ಳುವ ಅಪಾಯವಿದೆ' ಎಂದು ಈ ನಲವತ್ತು ಅಥವಾ ಐವತ್ತು ವರ್ಷಗಳಷ್ಟು ಕೆಳಗೇ ಹೆಚ್. ಜಿ ವೆಲ್ಸ್ ಮತ್ತಿತರರು ನಮ್ಮನ್ನು ಎಚ್ಚರಿಸಿದ್ದಾರೆ ಮತ್ತು ಇದರಿಂದ ಕೇವಲ ಇರುವೆ ಮತ್ತಿತರ ಅಂಥ ಕ್ರಿಮಿಗಳು ಉಳಿಯಬಹುದು ಅಂತ. ಹಾಳುಬಿದ್ದ ಜರ್ಮನಿಯ ನಗರಗಳನ್ನು ನೋಡಿದ ಯಾವನೇ ಆಗಲಿ ಈ ರೀತಿಯ ಯೋಚನೆ–ಯೋಚಿಸಬಹುದಾದ್ದೇ ಎನ್ನುತ್ತಾನೆ. ಜಗತ್ತನ್ನು ಸಂಪೂರ್ಣವಾಗಿ ಅವಲೋಕಿಸಿದಾಗ ಗೊತ್ತಾಗುವುದೇನೆಂದರೆ, ಅನೇಕ ದಶಕಗಳಿಂದ ಮಾನವ ಪ್ರವೃತ್ತಿ ಅರಾಜಕತೆಯತ್ತ ವಾಲುತ್ತಿಲ್ಲ ಬದಲಿಗೆ ಗುಲಾಮಗಿರಿಯತ್ತ ಬಾಗುತ್ತಿದೆ. ನಾವು ಸಾಮಾಜಿಕ ಸರ್ವನಾಶದತ್ತ ಹೋಗುತ್ತಿಲ್ಲ. ಬದಲಿಗೆ ಭಯಾನಕವಾದ ಗುಲಾಮಗಿರಿಯನ್ನು ಕಾಯ್ದುಕೊಳ್ಳುತ್ತಿದ್ದ ಹಿಂದಿನ ದಿನಗಳತ್ತ ಸಾಗುತ್ತಿದ್ದೇವೆ. ಬರ್ನಹ್ಯಾಮ್‌ರ Theory ಬಹಳ ಚರ್ಚೆಗೆ ಒಳಪಟ್ಟಿದೆ. ಆದರೆ ಕೆಲವರು ಇದರ ಅನನ್ಯ ಸಾಧ್ಯತೆಯನ್ನು ಗ್ರಹಿಸಿದ್ದಾರೆ–ಅದೇನೆಂದರೆ ಪ್ರಪಂಚವನ್ನು ನೋಡುವ ದೃಷ್ಟಿ, ನಂಬಿಕೆಯ ಬಗೆ ಮತ್ತು ಸಾಮಾಜಿಕ ಶಿಲ್ಪ ಇವು ಆತ ಹೇಳಿದಂತೆಯೇ ಗೆಲ್ಲಲಸಾಧ್ಯ ರಾಷ್ಟ್ರಗಳಲ್ಲಿ ಮತ್ತು ಸದಾ 'ಶೀತಲ ಯುದ್ಧ' ವಿದ್ದ ಬಲಶಾಲಿಗಳಲ್ಲಿ ಇರುತ್ತದೆ.

ಒಮ್ಮೊಮ್ಮೆ ಅಣುಬಾಂಬು ಸೈಕಲ್ ಮತ್ತು ಗಡಿಯಾರಗಳಷ್ಟು ಸುಲಭವಾಗಿ ತಯಾರಿಸಲು ಸಾಧ್ಯವಿದ್ದಲ್ಲಿ ನಮ್ಮನ್ನು ಅನಾಗರೀಕ ಪ್ರಪಂಚಕ್ಕೆ ಎಸೆದುಬಿಡುವುದು ಸಾಧ್ಯವಿತ್ತು. ಆದರೆ ಇದು ಸಾರ್ವಭೌಮತ್ವ ಮತ್ತು ಅತಿ ಕೇಂದ್ರಿತ ಪೋಲೀಸ್ ರಾಜ್ಯಗಳ ಸ್ವತ್ತಾಗಿದೆ. ಇದು ಈಗ ತೋರುವಂತೆ ಯುದ್ಧನೌಕೆಗಳಷ್ಟೇ ಕಷ್ಟ ಮತ್ತು ವಿರಳ. ಆದರೆ ಎಲ್ಲರಿಗೂ ದೊರಕದ ಬೆಲೆಯುಳ್ಳದ್ದಾದ್ದರಿಂದ ದೊಡ್ಡ ಪ್ರಮಾಣದ ಯುದ್ಧ ಮುಂದೂಡಲ್ಪಡುತ್ತಿದೆ ಅದೂ ಅನಿರ್ದಿಷ್ಟ ಮುಂದುವರಿಕೆ 'ಶಾಂತಿಯಲ್ಲದ ಶಾಂತಿ'ಯ ಹೆಸರಿನಲ್ಲಿ.

# ಬಸವಣ್ಣನವರು - ಒಂದು ವಿವೇಚನೆ

—ಎಂ. ಆರ್. ವಿಶ್ವನಾಥರೆಡ್ಡಿ

ಬಸವಣ್ಣನವರನ್ನು ಕುರಿತು ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ. ಸಾಹಿತ್ಯ ಸೃಷ್ಟಿಯಾಗಿದೆ. ಬಸವಣ್ಣನವರಿಗೆ ಸಿಕ್ಕಷ್ಟು ಪ್ರಾಮುಖ್ಯತೆ, ಜನಪ್ರಿಯತೆ ಇನ್ಯಾವ ವಚನಕಾರರಿಗೂ ಸಿಕ್ಕಿಲ್ಲ. ತಮ್ಮ ಜೀವಿತಕಾಲದಲ್ಲಿಯೇ ದಂತ ಕತೆಯಾದವರು ಬಸವಣ್ಣನವರು. ಅವರ ಸಮಕಾಲೀನ ವಚನಕಾರರಿಗಂತೂ ಅವರೊಬ್ಬ ಅತಿ ಮಾನವರು ಕಾರಣಪುರುಷರು. ಮುಂದೆ ಬಂದ ಹರಿಹರನಂತಹ ಕವಿಗಳು ಬಸವಣ್ಣನವರನ್ನು "ರಾಜ"ನನ್ನಾಗಿಯೂ "ದೇವರ"ನ್ನಾಗಿಯೂ ವೈಭವೀಕರಿಸಿದ್ದರೆ ಐತಿಹಾಸಿಕ ವ್ಯಕ್ತಿಯನ್ನು ಪುರಾಣೀಕರಿಸಿದ್ದಾರೆ. ಇದು ಬಸವಣ್ಣನವರನ್ನು ನೋಡುವ ಒಂದು ದೃಷ್ಟಿ. ಈ ದೃಷ್ಟಿಕೋನದವರು ಹನ್ನೆರಡನೆಯ ಶತಮಾನದಿಂದ ಹಿಡಿದು ಈವರೆಗೂ ಕಾಣಸಿಗುತ್ತಾರೆ.

ಇನ್ನೊಂದು ಗುಂಪಿನ ವಿಮರ್ಶಕರಿದ್ದಾರೆ ಇವರು ಆಧುನಿಕ ವಿಚಾರಗಳಿಂದ ಪ್ರಭಾವಿತರಾದವರು. ಇವರಿಗೆ ಬಸವಣ್ಣನವರು "ಸಮಾಜವಾದಿ" "ಸರ್ವೋದಯದ ಹರಿಕಾರ", "ವಿಶ್ವಮಾನವ", "ಮಾನವತಾವಾದಿ", "ಕ್ರಾಂತಿಕಾರಿ" ಇತ್ಯಾದಿ ಮೇಲೆ ಹೇಳಿದ ಎರಡೂ ಗುಂಪಿನವರು ಬಸವಣ್ಣನವರನ್ನು ಕುರಿತು ಸಾಕಷ್ಟು ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಅದರಲ್ಲೂ ಬಹಳಷ್ಟು ಸಾಹಿತ್ಯ, ಚರ್ವಿತ ಚರ್ವಣ.

ಬಸವಣ್ಣನವರ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಅವರ ಬದುಕು ವಿಚಾರಗಳ ವಸ್ತುನಿಷ್ಠ ಮೌಲ್ಯಮಾಪನ ಮಾಡುವುದು ಮೂರನೆಯ ದೃಷ್ಟಿ. ಈ ನಿಟ್ಟಿನಲ್ಲಿ ಆಗಬೇಕಾದಷ್ಟು ವಿಚಾರ ವಿಮರ್ಶೆ ಆಗಿಲ್ಲ. ಅಂತಹುದೊಂದು ಸಣ್ಣ ಪ್ರಯತ್ನ ಈ ಪ್ರಬಂಧ, ಇಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕು. ಬಸವಣ್ಣನವರ ವಿಚಾರಗಳು ಎಂದಾಗ ಅವು ವಚನಕಾರರೆಲ್ಲರ ವಿಚಾರಗಳೇ ಎಂದಾಗಲಿ, ವಚನಕಾರರ ವಿಚಾರಗಳು ಎಂದಾಗ ಅವು ಬಸವಣ್ಣನವರ ವಿಚಾರಗಳು ಎಂದಾಗಲೀ ಭಾವಿಸಬೇಕಿಲ್ಲ. ಭಕ್ತಿ, ಕಾಯಕ, ಸಂಸಾರ, ಗುರುಲಿಂಗ ಜಂಗಮ ಮುಂತಾದ ಪರಿಕಲ್ಪನೆಗಳ ಬಗ್ಗೆ ಎಲ್ಲರ ಅಭಿಪ್ರಾಯಗಳು ಒಂದೇ ತೆರನಾಗಿಲ್ಲ. ಅನೇಕ ವಿಷಯಗಳನ್ನು ಕುರಿತಾಗಿ ಅವರಲ್ಲಿ ಮೂಲಭೂತವಾದ ಮತಭೇದವಿದೆ. ಹಾಗೆ ನೋಡ ಹೋದರೆ ಬಸವಣ್ಣನವರ ಸಮಗ್ರ ವಚನಗಳನ್ನು ವಸ್ತುನಿಷ್ಠವಾಗಿ ಅಭ್ಯಾಸ ಮಾಡಿದಾಗ ನಮಗೆ ನಿಚ್ಚಳ

ಎಂ. ಆರ್. ವಿಶ್ವನಾಥರೆಡ್ಡಿ, ಲಕ್ಷ್ಮೀನಿವಾಸ, ಮೋಕರಸ್ತೆ, ಗಾಂಧಿನಗರ, ಬಳ್ಳಾರಿ

ವಾಗಿ ಕಂಡುಬರುವ ಅಂಶವೆಂದರೆ ಅವರೊಬ್ಬ ಭಕ್ತರು, ಅಸಾಮಾನ್ಯ ಭಕ್ತರು ಎಂಬುದು. ಬಸವಣ್ಣನವರು "ಭಕ್ತಿ ಭಂಡಾರಿ." ಅವರು ಮೊದಲನೆಯದಾಗಿಯೂ ಭಕ್ತರು ; ಕಡೆಯದಾಗಿಯೂ ಭಕ್ತರು. ಉಸಿರು ತೆಗೆದುಕೊಳ್ಳುವಾಗೊಮ್ಮೆ 'ಶಿವಾಯ ನಮಃ' ಎನ್ನುವ ಉಸಿರು ಬಿಡುವಾಗೊಮ್ಮೆ 'ಶಿವಾಯ ನಮಃ' ಎನ್ನುವಂತಹ ಭಕ್ತರು. ಗುರುಲಿಂಗ ಜಂಗಮ ಸೇವೆಗಾಗಿ ತಮ್ಮನ್ನು ತಾವೇ ಅರ್ಪಿಸಿಕೊಂಡವರು ಅವರು. ತನ್ನದೆನ್ನುವ ಸರ್ವಸ್ವವನ್ನೂ ಶರಣರಿಗೆ ಅರ್ಪಿಸಿ, ತನ್ಮೂಲಕ ಶಿವನಿಗೆ ಅರ್ಪಿಸುವ ಕ್ರಿಯೆಯಲ್ಲಿ ಮಗ್ನರಾದ ಮಹಾಸಾಧಕರು. ಅದರಲ್ಲಿ ಬೆರಗುಗೊಳಿಸುವಂತಹ ಸಿದ್ಧಿಯನ್ನು ಪಡೆದವರು. ಅವರದು ಜ್ಞಾನ ಮಾರ್ಗವಲ್ಲ, ಕರ್ಮಮಾರ್ಗವಲ್ಲ, ಭಕ್ತಿ ಮಾರ್ಗ, ಪ್ರಪತ್ತಿಮಾರ್ಗ. ಅವರ ಬದುಕಿನಲ್ಲಿ ಗುರುಲಿಂಗಜಂಗಮ ಭಕ್ತಿಯು ಸ್ಥಾಯಿಯೂ ಹೌದು, ಸಂಚಾರಿಯೂ ಹೌದು. ಗುರುಲಿಂಗಜಂಗಮವೇ ಸರ್ವಸ್ವವಾದ ಬಸವಣ್ಣನವರಿಗೆ ಗುರುಲಿಂಗಜಂಗಮಕ್ಕೆ ಹೊರತಾದ ಸಂಸಾರವೆಲ್ಲವೂ ತ್ಯಾಜ್ಯ. ಅರ್ಥಹೀನ, ಶುಷ್ಕ, ಸಮಗ್ರ ಬದುಕನ್ನು ಕುರಿತಾಗಿ ಅವರಿಗೆ ಪ್ರೀತಿಯೂ ಇಲ್ಲ, ಆಸಕ್ತಿಯೂ ಇಲ್ಲ. ಅವರು ಭಕ್ತಿರತರು, ಸಂಸಾರ ವಿರಕ್ತರು. ಅವರಿಗೆ "ಸಂಸಾರವೆಂಬುದು ಗಾಳಿಯ ಸೊಡರು". ಅವರು "ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ. ಸಂಸಾರ ಸಂಗವ ಬಿಡದು ನೋಡೆನ್ನ ಮನವು" ಎಂದವರು. "ಸಂಸಾರ ಸಾಗರ ಶಿರದಟ್ಟವಾದ ಬಳಿಕ ಏನ ಹೇಳುವೆನಯ್ಯ" ಎಂದು ಮೊರೆಯಿಟ್ಟವರು. "ಕೆಸರಲ್ಲಿ ಬಿದ್ದ ಪಶುವಿನಂತೆ ಆನು ದೆಸೆದೆಸೆಗೆ ಬಾಯಿ ಬಿಡುತ್ತಿದ್ದೆನಯ್ಯಾ" ಎಂದು ಪರಿತಪಿಸಿದವರು. "ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯ, ಎನ್ನುವನು ಕಾಯಯ್ಯ" ಎಂದು ಆರ್ತರಾಗಿ ಕೂಡಲ ಸಂಗಮನಲ್ಲಿ ಮೊರೆಯಿಟ್ಟವರು ಇದೇ ಮನೋಭಾವವನ್ನು ಅಭಿವ್ಯಕ್ತಗೊಳಿಸಿದ ನೂರಾರು ವಚನಗಳಿವೆ. ಅವುಗಳಲ್ಲಿ ಇನ್ನು ಕೆಲವನ್ನು ನೋಡೋಣ.

"ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು
ತೇಲಲೀಯದು ಗುಂಡು, ಮುಳುಗಲೀಯದು ಬೆಂಡು
ಇಂತಪ್ಪ ಸಂಸಾರ ಶರಧಿಯ ದಾಂಟಿಸಿ ಕಾಯೋ" ಎಂದು

ಹಲುಬಿದ್ದಾರೆ ಬಸವಣ್ಣನವರು.

"ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ

ಏಕೆ ಹುಟ್ಟಿಸಿದೆ ಪರಲೋಕ ದೂರನ" ಎಂದು ದೂರಿದ್ದಾರೆ. "ಹುಟ್ಟಿತ್ತೆ ತಪ್ಪಾಯಿತೆ ಎಲೆಲಿಂಗವೆ" ಎಂದು ಪಶ್ಚಾತ್ತಾಪಪಟ್ಟು ಸಾಮಾನ್ಯ ಜೀವನದಿಂದ ವಿಮುಖಿಯಾಗಿದ್ದಾರೆ ಬಸವಣ್ಣನವರು. ಶರಣರ ಸೇವೆಗೆ ಹೊರತಾದ ದೈನಂದಿನ



ಶೂನ್ಯ

ಜೀವನದಲ್ಲಿ ಬಸವಣ್ಣನವರು ಚೆಲುವನ್ನಾಗಲಿ ಅರ್ಥವನ್ನಾಗಲೀ ಕಾಣದಾಗಿದ್ದಾರೆ. ಭಕ್ತಿ ಜೀವನವಲ್ಲದ ಜೀವನ, ಜೀವನವೇ ಅಲ್ಲ ಎಂಬ ನಿಲುವನ್ನು ತಳೆದ ಬಸವಣ್ಣನವರಲ್ಲಿ ಬದುಕು, ಸಂಸಾರ ಇವೆಲ್ಲ ಸೀಮಿತ ಅರ್ಥವನ್ನು ಪಡೆದಿವೆ.

ಯಾರು ಬದುಕನ್ನು ಸಮಗ್ರವಾಗಿ ನೋಡುತ್ತಾರೋ, ಪ್ರೀತಿಸುತ್ತಾರೊ ಅಂತಹವರು ಬದುಕನ್ನು ಇನ್ನಷ್ಟು ಚೆಲುವಾದುದನ್ನಾಗಿ ಮಾಡಲು ಹಂಬಲಿಸುತ್ತಾರೆ. ಯಾರಿಗೆ ಜಗತ್ತು ಸತ್ಯವೋ ಅವರು ಆ ಜಗತ್ತಿನ ಬಗ್ಗೆ ಆಸ್ಥೆವಹಿಸುತ್ತಾರೆ. ಅನ್ಯಾಯ ಶೋಷಣೆಗಳನ್ನು ಗುರುತಿಸುತ್ತಾರೆ. ಕೊಳೆತು ನಾರುತ್ತಿರುವುದನ್ನು ತೆಗೆದು ಸ್ವಚ್ಛತಾ ಕ್ರಿಯೆಯಲ್ಲಿ ತೊಡಗಿ ಕ್ರಿಯಾಶೀಲರಾಗುತ್ತಾರೆ. ಹೊಸದನ್ನು ಕಾಣುವ, ಕಂಡದನ್ನು ಕಟ್ಟುವ ಸೃಜನಶೀಲರಾಗುತ್ತಾರೆ. ಬದುಕಿನಲ್ಲಿ ತನ್ಮಯರಾಗಿ ಅದರ ಎಲ್ಲ ಕ್ರಿಯೆಗಳಿಗೂ ಪ್ರತಿಸ್ಪಂದಿಸುತ್ತಾರೆ. ಇಂತಹವರಿಂದಲೇ ಸಾಮಾಜಿಕ ಬದಲಾವಣೆಗಳಾಗುವುದು. ಪ್ರಗತಿ ಸಾಧಿಸುವುದು.

ಗುರುಲಿಂಗಜಂಗಮಕ್ಕೆ ಮಾತ್ರ ಸ್ಪಂದಿಸಿದ ಬಸವಣ್ಣನವರ ಕ್ರಿಯಾಶೀಲತೆ ಇತಿಮಿತಿಗಳಿಗೆ ಒಳಪಟ್ಟಿದೆ. ಅವರಿಗೆ ಭೌತಿಕ ಜಗತ್ತು 'ಬಂದನ'ವಾಗಿ, 'ಬಲೆ'ಯಾಗಿ ಕಂಡುಬಂದುದರಿಂದ ಧರ್ಮಕ್ಕೆ ಹೊರತಾದ ಸಮಸ್ಯೆಗಳು ಅವರ ಕಣ್ಣಿಗೆ ಬೀಳಲೇ ಇಲ್ಲ. ಬಿದ್ದರೂ ಅವನ್ನು ಉಪೇಕ್ಷಿಸಿದರು. ಬದುಕನ್ನು ನೇತ್ಯಾತ್ಮಕ ದೃಷ್ಟಿಯಿಂದ ನೋಡಿದ ಅವರಿಗೆ ಸಾಮಾಜಿಕ ಆಗು ಹೋಗುಗಳ ಬಗ್ಗೆ ವಿಚಾರ ಮಾಡಲು ಅಗತ್ಯವಾಗಿ ಬೇಕಾದ ಮಾನಸಿಕ ಮತ್ತು ಬೌದ್ಧಿಕ ಸಿದ್ಧತೆಗಳಿರಲಿಲ್ಲ. ಆಸಕ್ತಿ ಮೊದಲೇ ಇರಲಿಲ್ಲ. "ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡುವುದು ಮಾಡಿದ ಪೂಜೆ ನೋಡುವುದು" ಇದನ್ನೆ ಆದರ್ಶವಾಗಿಟ್ಟುಕೊಂಡಿದ್ದ "ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ. ನಗುವುದು ದುಡಿವುದು ಶಿವಭಕ್ತರೊಡನೆ" ಎಂಬ ಪರಮೋದ್ದೇಶವಿಟ್ಟುಕೊಂಡಿದ್ದ ಬಸವಣ್ಣನವರಿಗೆ ಬದುಕಿನ ಎಲ್ಲ ಒಳನೋಟಗಳೂ ದಕ್ಕಿರಲಿಲ್ಲ. ಎಲ್ಲ ಆಯಾಮಗಳೂ ಕಾಣಿಸಲಿಲ್ಲ. ಈ ಹಿನ್ನೆಲೆಯಲ್ಲಿ ಅವರು ಪ್ರತಿಪಾದಿಸಿದರೆಂದು ಹೇಳಲಾದ ಕಾಯಕ ದಾಸೋಹ, ಜಾತಿರಹಿತ ಸಮಾಜ, ಏಕದೇವತೋಪಾಸನೆ ಮುಂತಾದ ವಿಚಾರಗಳನ್ನು ಪರೀಕ್ಷಿಸೋಣ.

ಕಾಯಕ ಎಂದರೆ ದುಡಿಮೆ, ಕಸಬು, ದೇಹಶ್ರಮದ ಕೆಲಸ. ಇವೆಲ್ಲ ಅರ್ಥಗಳು ನಿಘಂಟಿನಲ್ಲಿ ಕಾಣಬರುವಂತಹವು. ಈ ಸರಳ ಸಾಮಾನ್ಯ ಕನ್ನಡ ಪದ ವಚನಕಾರರಲ್ಲಿ ಹೊಸದೇ ಆದ ಅರ್ಥವನ್ನು ಪಡೆದು ಮಿರಮಿರನೆ ಮಿಂಚಿದೆ. ಹನ್ನೆರಡನೆ ಶತಮಾನದ ಅನಂತರ ಕಾಯಕ ಪದ ಕೇವಲ ಒಂದು ಶಬ್ದವಾಗಿ ಉಳಿಯದೆ ಒಂದು ಮೌಲ್ಯವಾಗಿ ಪರಿಣಮಿಸಿದೆ. ವಚನಕಾರರ ದೃಷ್ಟಿಯಲ್ಲಿ ಕಾಯಕ ಎಂದರೆ ತಾನು ಮಾಡುತ್ತಿರುವ

ಉದ್ಯೋಗವನ್ನೇ ಶಿವಪೂಜೆ ಎಂದು ತಿಳಿದು ಮಾಡುವುದು. ಹೀಗೆ ಸಮರ್ಪಣ ಭಾವದಿಂದ ಮಾಡುವ ಕಾಯಕದ ಫಲ ತನಗೊಬ್ಬನಿಗೇ ಅಲ್ಲದೆ ಸಮಾಜಕ್ಕೂ ದಕ್ಕಬೇಕು ; ಪ್ರಯೋಜನಕಾರಿಯಾಗಬೇಕು. ಕಾಯಕವೆಂದರೆ ಕೇವಲ ಹೊಟ್ಟೆಯ ಪಾಡಿಗಾಗಿ ಅನಿವಾರ್ಯವಾಗಿ ಮಾಡಬೇಕಾದ ಕೆಲಸವಲ್ಲ. ಅದು ಸಂತೋಷದಿಂದ ಶ್ರದ್ಧೆಯಿಂದ ಮಾಡಬೇಕಾದ ಕೆಲಸ. ಕಾಯಕದಲ್ಲಿ ಮೇಲು ಕೀಳುಗಳಿಲ್ಲ. ಮೈ ಬೆವರು ಸುರಿಸಿ ಸಮರ್ಪಣ ಭಾವದಿಂದ ಮಾಡಿದ ಕಾಯಕವು—ಸಮಗಾರನದೇ ಇರಲಿ, ಕ್ಷೌರಿಕನದೇ ಇರಲಿ, ಒಕ್ಕಲಿಗನದೇ ಇರಲಿ, ಉಪಾಧ್ಯಾಯನದೇ ಇರಲಿ—ಪೂಜೆಯಾಗುತ್ತದೆ, ಆರಾಧನೆಯಾಗುತ್ತದೆ, ತಪಸ್ಸಾಗುತ್ತದೆ, ಕಾಯಕವೇ ಕೈಲಾಸವಾಗುತ್ತದೆ. ಈ ಅರ್ಥದಲ್ಲಿ ಕಾಯಕ ತತ್ವವು ವಚನಕಾರರು ನಾಡಿನ ಸಂಸ್ಕೃತಿಗೆ ಕೊಟ್ಟಿರುವ ಹಿರಿಯ ಕಾಣಿಕೆ. ಈ ವಿಷಯದಲ್ಲಿ ಎಲ್ಲ ವಚನಕಾರರೂ ಏಕಾಭಿಪ್ರಾಯಿಗಳಲ್ಲ. ಸಮಗ್ರ ವಚನ ಸಾಹಿತ್ಯವನ್ನು ಮಥನ ಮಾಡಿದಾಗ ತೇಲಿಬಂದ ಮೌಲ್ಯಗಳಲ್ಲಿ ಕಾಯಕ ತತ್ವವೂ ಒಂದು ಎಂದು ತಿಳಿಯಬೇಕೆ ಹೊರತಾಗಿ ಎಲ್ಲ ವಚನಕಾರರ ವೈಯುಕ್ತಿಕ ನಿಲುವಲ್ಲ. ಬಸವಣ್ಣನವರಿಗೆ ಕಾಯಕವೆಂದರೆ "ಸಂಸಾರದೊಳಗೆ ನಿಚ್ಚನಿಚ್ಚ ಶಿವರಾತ್ರಿಯ ಮಾಡುವುದು. ಬೇಗಬೇಗ ಅರ್ಚನೆ ಪೂಜನೆಯ ಮಾಡುವುದು." ಶರಣರ ದಾಸನಾಗುವುದೇ ಅವರ ಬದುಕಿನ ಮಾರ್ಗ ಮತ್ತು ಗುರಿ.

ಪರಮಧ್ಯೇಯವಾಗಿದ್ದ ಬಸವಣ್ಣನವರ ಕಾಯಕ ಲೌಕಿಕ ಜಗತ್ತಿಗಲ್ಲ. ನಂಬಿದ ಹೆಂಡತಿ ಮಕ್ಕಳಿಗಾಗಿ ಅಲ್ಲ. ಅವರ ಕಾಯಕವೆಲ್ಲ ಶರಣರಿಗಾಗಿ, ಜಂಗಮರಿಗಾಗಿ. ಬಸವಣ್ಣನವರಿಗೆ ಶಿವ ಬೇರೆ ಅಲ್ಲ, ಶಿವಭಕ್ತ ಬೇರೆ ಅಲ್ಲ. ಜಂಗಮನನ್ನೇ ಶಿವನೆಂದು ಭಾವಿಸಿದ ಅವರಿಗೆ ಜಂಗಮ ಪೂಜೆಯೇ ಶಿವಪೂಜೆ. ಅವರ ಎಲ್ಲ ಕಾಯಕವೂ ಗುರುಲಿಂಗ ಜಂಗಮಕ್ಕೆ ಮಾತ್ರ ಆದುದರಿಂದ ಅವರಿಗೆ ಕಾಯಕವೇ ಕೈಲಾಸವಾಗಲಿಲ್ಲ. ಶರಣರ ಕಾಯವೇ ಕೈಲಾಸವಾಯಿತು. ಅವರೇ ಹೇಳಿದ್ದಾರೆ "ಶರಣರ ಕಾಯವೇ ಕೈಲಾಸ ಕಾಣಿರೊ" ಎಂದು. ಅವರು 'ಜಂಗಮ' 'ಶರಣ' ಎಂಬ ಶಬ್ದಕ್ಕೆ ವ್ಯಾಪಕಾರ್ಥವನ್ನೇನೂ ಇಟ್ಟುಕೊಳ್ಳಲಿಲ್ಲ. ಶಿವಭಕ್ತರಾದವರು ಮಾತ್ರ ಶರಣರು ಮತ್ತು ಶಿವಭಕ್ತರಿಗೆ ಶಾಂತಿ ಸಮಾಧಾನಗಳನ್ನುಂಟು ಮಾಡುತ್ತ ಅದೇ ರೂಪದಲ್ಲಿ ಸಂಚರಿಸುವವನೇ ಜಂಗಮ ಎಂಬರ್ಥದಲ್ಲಿ ಹೇಳಿದುದಲ್ಲದೆ ಈ ಶರಣರು ಜಂಗಮರು ಶಿವಸ್ವರೂಪಿಗಳೆಂದು ಭಾವಿಸಿದರು. ಬಸವಣ್ಣನವರು ಬಿಜ್ಜಳನಲ್ಲಿ ಭಂಡಾರಿಯಾಗಿದ್ದವರು. ಸ್ವಲ್ಪಕಾಲ ಮಂತ್ರಿಯೂ ಆಗಿದ್ದಿರಬೇಕು. ಶರಣರ ಕಾಯಕ ತತ್ವದಂತೆ ಬಸವಣ್ಣನವರು ತಮ್ಮ ವೃತ್ತಿಯಲ್ಲಿ ಸೊಗಸನ್ನೂ ಅರ್ಥವನ್ನೂ ಕಂಡುಕೊಳ್ಳಬೇಕಿತ್ತು. ಆದರೆ ಅವರ ಒಂದೇ ಒಂದು ವಚನದಲ್ಲಿ ಭಂಡಾರಿ ಕಾಯಕದ ಬಗ್ಗೆ ಪ್ರೀತಿಗೌರವವನ್ನು ವ್ಯಕ್ತಪಡಿಸಿದ ನಿದರ್ಶನವಿಲ್ಲ. ಅದಕ್ಕೆ ಬದಲಾಗಿ ತಮ್ಮ ಹೊಟ್ಟೆಯ

ಪಾಡಿಗಾಗಿ ಮಾಡುತ್ತಿದ್ದ ಭಂಡಾರಿ ವೃತ್ತಿಯ ಬಗ್ಗೆ ತಿರಸ್ಕಾರವಿದ್ದಂತೆ ಕೂಡ ಕಂಡುಬರುತ್ತದೆ.

ಇಲ್ಲಿ ಹೇಳಬೇಕಾದ ಸಂಗತಿಯೊಂದಿದೆ. ಶ್ರಮದ ದುಡಿಮೆಯನ್ನೇ ಶಿವಪೂಜೆ ಎಂದು ಭಾವಿಸಿ "ಕಾಯಕವೇ ಕೈಲಾಸ" ಎಂದು ಹೇಳಿದವರು ಶ್ರಮಿಕವರ್ಗದಿಂದ ಬಂದ ವಚನಕಾರರು. ಮೇಲ್ವರ್ಗದಿಂದ ಬಂದ ಬಸವಣ್ಣ ಮುಂತಾದ ವಚನಕಾರರಿಗೆ ಕಾಯಕದ ಅರ್ಥವೇ ಬೇರೆ.

ಶ್ರಮಜೀವಿ ವರ್ಗದಿಂದ ಬಂದ ವಚನಕಾರ ನುಲಿಯ ಚೆಂದಯ್ಯನವರು ಹೇಳುತ್ತಾರೆ :

"ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ
ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು
ಜಂಗಮವಾದರೂ ಕಾಯಕದಿಂದಲೇ ವೇಷದ ಪಾಶಹರಿವುದು"

ಎಂಬುದಾಗಿ. ಆಯ್ದಕ್ಕಿ ಮಾರಯ್ಯನವರು ಇನ್ನೂ ಮುಂದುವರೆದಿದ್ದಾರೆ. ಅವರದು ತೀವ್ರ ಸಾಮಾಜಿಕ ಕಳಕಳಿಯ ಪ್ರಜ್ಞೆ. ಅವರ ಒಂದು ಸುಂದರವಚನ ಹೀಗಿದೆ :

"ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು.
ಲಿಂಗಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದರೂ
ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು."

ಚೆಂದಯ್ಯ, ಮಾರಯ್ಯನವರಂತಹ ಶರಣರಿಗೆ ಕಾಯಕವೇ ಕೈಲಾಸ. ಆದರೆ ಬಸವಣ್ಣನವರಿಗೆ ಕೂಡಲ ಸಂಗನ "ಶರಣರ ಕಾಯವೇ ಕೈಲಾಸ."

ಇನ್ನು ದಾಸೋಹ, ದಾಸೋಹವೆಂದರೆ ಸಮಸ್ತವನ್ನೂ ಶಿವನಿಗೆ ಅರ್ಪಿಸುವ ಸಮರ್ಪಣ ಕ್ರಿಯೆ. ಇದೊಂದು ಭಕ್ತಿಭಾವ. ಇದು ಕಿಂಕರಭಾವದಿಂದ ಮಾಡುವ ಗುರುಲಿಂಗಜಂಗಮ ಸೇವೆ. ಶರಣರು ದಾಸೋಹದ ಕಲ್ಪನೆಯನ್ನು ಇನ್ನಷ್ಟು ಹಿಗ್ಗಿಸಿ ಅದನ್ನು ಒಂದು ಸಾಮಾಜಿಕ ಮೌಲ್ಯವನ್ನಾಗಿ ಪರಿವರ್ತಿಸಿದ್ದಾರೆ. ದಾಸೋಹವೆಂದರೆ ಕಾಯಕಜೀವಿಯೊಬ್ಬನು ತಾನು ಗಳಿಸಿದ್ದನ್ನು ಸೇವಾ ಮನೋಭಾವದಿಂದ ಹಾಗು ನಿರಹಂಕಾರದಿಂದ ಸಮಾಜದ ಹಿತಕ್ಕೆ ವಿನಿಯೋಗಿಸಬೇಕು. ಬಸವಣ್ಣನವರು ಭಕ್ತಿ ಭಾಂಡಾರಿಯಾದುದರಿಂದ ಅವರ ಬದುಕೇ ದಾಸೋಹದ ಬದುಕಾಗಿತ್ತು. ತ್ರಿವಿಧ ದಾಸೋಹದಲ್ಲಿ ಅವರು ತಮ್ಮನ್ನು ಕರ್ಪೂರದಂತೆ ಉರಿಸಿಕೊಂಡರು. ಗಂಧದಂತೆ ತೇದುಕೊಂಡರು. "ದಾಸೋಹಿಯಾಗಿರ್ಪ ದಾಸನಾಗಿರಸೆನ್ನ ಕೂಡಲ ಸಂಗಮ ದೇವಾ" ಎಂಬುದು ಅವರ ನಿತ್ಯ ಪ್ರಾರ್ಥನೆ.

"ಜನ್ಮ ಜನ್ಮಕ್ಕೆ ಹೋಗಲೀಯದೆ ಸೋಹಂ ಎಂದೆನಿಸದೆ ದಾಸೋಹಂ
ಎಂದೆನಿಸಯ್ಯಾ. ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ"

ಎಂದು ಹಾಡಿದವರು ಅವರು. ಬಸವಣ್ಣನವರ ಕಿಂಕರ ಭಾವದ, ದಾಸೋಹ ಭಾವದ ಮೂಲ ಸ್ರೋತ ಅವರ ಮುಗ್ಧಭಕ್ತಿ. ಅವರ ಸಮಸ್ತ ದೈಹಿಕ, ಬೌದ್ಧಿಕ, ಮಾನಸಿಕ ಕ್ರಿಯೆಗಳನ್ನು ನಿಯಂತ್ರಣಕ್ಕೊಳಪಡಿಸಿ, ಗುರುಲಿಂಗಜಂಗಮದಲ್ಲಿ ಕೇಂದ್ರೀಕೃತವಾಗುವಂತೆ ಮಾಡಿದ ಶಕ್ತಿಯೇ ಈ ಮುಗ್ಧ ಭಕ್ತಿ; ಈ ಮುಗ್ಧ ಶ್ರದ್ಧೆ. ಈ ಶ್ರದ್ಧೆಯ ಪರಿಣಾಮವಾಗಿ ಬಸವಣ್ಣನವರಲ್ಲಿ ದಾಸೋಹವು ಭಾವನಾತ್ಮಕ ಪಾತಳಿಯಲ್ಲಿಯೇ ಸ್ಥಾಯಿಯಾಗಿ ನಿಂತುಹೋಯಿತು. ಬುದ್ಧಿಪೂರ್ವಕ ಕ್ರಿಯೆಯಾಗಲಿಲ್ಲ. ಇದರಿಂದಾಗಿ ಅಂತರಂಗ ಬಹಿರಂಗ ಶುದ್ಧಿಯುಳ್ಳ ಶರಣರನ್ನು ಕಂಡರೆ ಅವರು ಎಷ್ಟು ಪುಳಕಿತರಾಗುತ್ತಿದ್ದರೋ ಕೇವಲ ವಿಭೂತಿ ರುದ್ರಾಕ್ಷಿಗಳವರನ್ನು ಕಂಡರೂ ಅಷ್ಟೇ ಪುಳಕಿತರಾಗುತ್ತಿದ್ದರು.

"ನಮ್ಮ ಕೂಡಲಸಂಗನ ಶರಣರಿಗಲ್ಲದೆ ಬೇರೆ ಇಚ್ಛಾಭೋಜನವನಿಕ್ಕಿದೊಡೆ ಕಿಚ್ಚಿನೊಳಗೆ ಉಚ್ಚೆಯ ಹೊಯ್ದು ಹವಿಯ ಬೇಳ್ದಂತಾಯಿತ್ತು" ಎಂದು ಅವರು ಹೇಳಿದಾಗ ಅವರ ದಾಸೋಹಕ್ಕೆ ಪಾತ್ರರಾಗುವ ಭಾಗ್ಯ ಎಲ್ಲರಿಗೂ ಇರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಬಸವಣ್ಣನವರ ಸಮಾಜಸೇವೆ ಶರಣ ಸಮಾಜಕ್ಕೆ ಮಾತ್ರ ಸೀಮಿತಗೊಂಡಿತ್ತು. ಅವರ ದಾಸೋಹವು ಕೆಲವೊಮ್ಮೆ ಶರಣರಿಂದಲೇ ದುರುಪಯೋಗಕ್ಕೆ ಗುರಿಯಾಗಿರಬೇಕು. ಇದನ್ನು ಕಂಡೇ ಇರಬೇಕು "ಅಂಗದ ಮೇಲೆ ಲಿಂಗವುಳ್ಳದ್ದೆಲ್ಲವೂ ಸಂಗಮನಾಥನೆಂಬ ಭಾವ ಬಸವಣ್ಣನವರಿಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ ನೋಡಾ" ಎಂದವರು ಉದ್ಗಾರವೆತ್ತಿದ್ದಾರೆ. ಚೆನ್ನಬಸವಣ್ಣನ "ಕಾಡುವ ಬೇಡುವ ಶರಣರ ತಂದು ಕಾಡಿಸು ಬೇಡಿಸು ಸಂಗಮದೇವಾ" ಎಂದ ಬಸವಣ್ಣನವರನ್ನು ಕಾಡಿ ಬೇಡಿ ಬದುಕಿದ ಮೈಗಳ್ಳರೆಷ್ಟೋ, ಲಾಂಛನಧಾರಿಗಳನ್ನೆಲ್ಲಾ ಸಾಕ್ಷಾತ್ ಶಿವನೆಂದು ನಂಬಿದ ಬಸವಣ್ಣನವರ ಮಹಾಮನೆಯಲ್ಲಿ ಉಣ್ಣುವುದನ್ನೇ ಕಾಯಕವನ್ನಾಗಿ ಮಾಡಿಕೊಂಡಿದ್ದ ಉಪಜೀವಿಗಳೆಷ್ಟೋ ಕೂಳಿಗಾಗಿ ಬಂದ ವೇಷಧಾರಿಗಳನ್ನು ಕಂಡೇ ಇರಬೇಕು ಪ್ರಭುದೇವರು "ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯ" ಎಂದು ನಗೆಯಾಡಿರುವುದು.

ಹಿಂದೂ ಧರ್ಮಕ್ಕೆ ಕಳಂಕಪ್ರಾಯವಾಗಿ ಉಳಿದುಕೊಂಡಿರುವ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಗಳ ವಿರುದ್ಧ ದನಿ ಎತ್ತಿದವರಲ್ಲಿ ಬಸವಣ್ಣನವರು ಅಗ್ರಗಣ್ಯರಾಗಿದ್ದಾರೆ. ಆದರೆ ಈ ಅನಿಷ್ಟಗಳ ವಿರುದ್ಧ ಅವರು ಯಾವುದೇ ಸಾಮಾಜಿಕ ಸಿದ್ಧಾಂತದ ಆಧಾರದ ಮೇಲಾಗಲೀ ಇಲ್ಲವೇ ಸಾಮಾಜಿಕ ಕಳಕಳಿಯಿಂದಾಗಲೀ ದನಿ

ಎತ್ತಲಿಲ್ಲ. ಹಾಗಾಗಿದ್ದಲ್ಲಿ ಅವರು ಜಗತ್ತಿನಲ್ಲಿ ಹಿಂದೆಂದೂ ಆಗದಂತಹ ಒಂದು ಸಾಮಾಜಿಕ ಕ್ರಾಂತಿಯನ್ನು ಉಂಟುಮಾಡಬಹುದಾಗಿತ್ತು. ಅವರು ಇವುಗಳ ವಿರುದ್ಧ ಸೆಟೆದು ನಿಂತುದು ಧಾರ್ಮಿಕ ಅಥವ ಮತೀಯ ಕಾರಣಗಳಿಂದಾಗಿ ಮಾತ್ರ. ಶಿವಭಕ್ತರಾದ ಬಸವಣ್ಣನವರು ಶಿವಭಕ್ತರಲ್ಲಿ ಮೇಲುಕೀಳುಗಳನ್ನಾಗಲೀ, ಉತ್ತಮರು-ಅಧಮರು ಎಂಬ ಭೇದವನ್ನಾಗಲೀ ಕಾಣಲಿಲ್ಲ. ಅಷ್ಟೇ ಅಲ್ಲ ಅವರು ಕೀಳುಜಾತಿಗೆ ಸೇರಿದ ಭಕ್ತರನ್ನು ತನಗಿಂತ ಶ್ರೇಷ್ಠರೆಂದು ಕಂಡರು. ಶಿವಭಕ್ತರಾದ ಹೊಲೆಯರ ಪಾದಪೂಜೆ ಮಾಡಿದರು. ಅವರಲ್ಲಿ ಶಿವನನ್ನೇ ಕಂಡರು. ಇದೊಂದು ಕ್ರಾಂತಿಕಾರಿ ವರ್ತನೆ. ಬಸವಣ್ಣನವರು ಮೊದಲ ಬಾರಿಗೆ ಶಿವಭಕ್ತನಾದ ಹೊಲೆಯನೊಬ್ಬನ ಗುಡಿಸಿಲಿನೊಳಗೆ ಹೋಗಿ ಅವನ ಪಾದಗಳಿಗೆ ಅಡ್ಡಬಿದ್ದು ಅವನೊಂದಿಗೆ ಪ್ರಸಾದ ಸ್ವೀಕರಿಸಿದ ಘಟನೆ ಈ ಪುರಾತನ ದೇಶದ ಸ್ಮರಣೀಯ ಘಟನೆಗಳಲ್ಲೇ ಅತ್ಯಂತ ಪವಿತ್ರವಾದ ಘಟನೆ ಎಂಬುದು ಐತಿಹಾಸಿಕ ಸತ್ಯ. "ಎನಗಿಂತ ಕಿರಿಯರಿಲ್ಲ ನಿಮಗಿಂತ ಹಿರಿಯರಿಲ್ಲ" ಎಂದು ಆ ಶಿವಭಕ್ತ ಹೊಲೆಯರ ಮುಂದೆ ಬಸವಣ್ಣನವರು ಕೈಜೋಡಿಸಿ ನಿಂತು :

"ಅಪ್ಪನು ನಮ್ಮ ಮಾದರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ"

ಎಂದು ವಿನೀತರಾಗಿ ಹೇಳಿದಾಗ ಆ ಶೋಷಿತ ಜನಕ್ಕೆ ಎಲ್ಲಿಲ್ಲದ ಆತ್ಮವಿಶ್ವಾಸ ಬಂದಿರಬೇಕು. ಬದುಕಿನಲ್ಲಿ ಭರವಸೆ ಕಂಡಿರಬೇಕು. ನಿಸ್ತೇಜ ಕಣ್ಣುಗಳಲ್ಲಿ ಬೆಳಕು ಮೂಡಿರಬೇಕು. ಅವರ ಈ ಕ್ರಿಯೆ ತಾರ್ಕಿಕವಾಗಿ ಜಾತಿರಹಿತ, ಶೋಷಣೆರಹಿತ ಸಮಾಜವೊಂದರ ನಿರ್ಮಾಣಕ್ಕೆ ನಾಂದಿಯಾಗಬೇಕಿತ್ತು. ಆದರೆ ಹಾಗಾಗಲಿಲ್ಲ. ಇದಕ್ಕೆ ಕಾರಣ ಬಸವಣ್ಣನವರಲ್ಲಿ ಧಾರ್ಮಿಕ ಕಳಕಳಿಯ ಹೊರತಾಗಿ ಯಾವುದೇ ಮಾನವೀಯ ಕಳಕಳಿ ಇರಲಿಲ್ಲ. ಸಾಮಾಜಿಕ ಸಿದ್ಧಾಂತವೊಂದರ ನೆಲೆಗಟ್ಟಿರಲಿಲ್ಲ. ಅವರು ಅಸ್ಪೃಶ್ಯರ ಸಾಮಾಜಿಕ, ಆರ್ಥಿಕ ಪ್ರಗತಿಯತ್ತ ಗಮನ ಹರಿಸಲಿಲ್ಲ. ಅವರ ಪಾರಮಾರ್ಥಿಕ ಉದ್ಧಾರದತ್ತ ಮಾತ್ರ ಗಮನ ಹರಿಸಿದರು. ಶಿವಭಕ್ತರಾದ ಹೊಲೆಮಾದಿಗರು ಬಸವಣ್ಣನವರಿಗೆ ಹಿರಿಯ ಮಾಹೇಶ್ವರರಾಗಿದ್ದುದು ನಿಜ. "ಹೊಲೆಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚವಾದ್ಯದಲಿ ಸನ್ಮಾನ ಮಾಡೆನೆ" ಎಂದು ಉದ್ದೇಷಿಸಿದ್ದುದು ನಿಜ. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೆ" ಎಂದು ಹೇಳಿದ್ದುದು ನಿಜ. ಆದರೆ ಶಿವಭಕ್ತನಲ್ಲದ ಹೊಲೆಯನು ಬಸವಣ್ಣನವರ ದೃಷ್ಟಿಯಲ್ಲಿ ಹೊಲೆಯನಾಗಿ ಉಳಿದದ್ದೂ ಅಷ್ಟೇ ನಿಜ. "ಕೂಡಲ ಸಂಗನನೊಲಿದು ಪೂಜಿಸುವಾತನೆ ಉತ್ತಮನು. ಆತನೆ ಸದ್ಬ್ರಾಹ್ಮಣ. ಇದನರಿಯದವನೀಗಲೆ ಕೆಟ್ಟ ಹೊಲೆಯ" ಎಂದ ಬಸವಣ್ಣ

ನವರು ಹೊಸದೇ ಆದ ಜಾತಿ ವ್ಯವಸ್ಥೆಯನ್ನು ಸೃಷ್ಟಿಸಿದರು. "ಜಾತಿವಿಜಾತಿಯಾದರೇನು ಅಜಾತಂಗೆ ಶರಣೆನ್ನದವನು ಆತನೇ ಹೊಲೆಯ" ಎಂದು ನುಡಿದಾಗ, "ಶಿವಪಥವೊಲ್ಲದವರೊಡನಾಡದಂತೆ, ಅನ್ಯ ಜಾತಿಯ ಸಂಗವ ಮಾಡದಂತೆ ಎನ್ನ ಪ್ರತಿಪಾಲಿಸು" ಎಂದಾಗ ಒಂದು ಹೊಸ ಮಾದರಿಯ ಅಸ್ಪೃಶ್ಯತೆ ಆಚರಣೆಗೆ ಬಂದಂತಾಯಿತು. ಎಂತಹವನಾದಡೇನು, ಲಿಂಗಮುಟ್ಟದವನೇ ಕೀಳು ಜಾತಿ. ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ" ಎಂದಾಗ ಸಮಾಜ ಸುಧಾರಕನ ದನಿ ಕೇಳಿಸುವುದಿಲ್ಲ. ಮತ ಪ್ರಚಾರಕನ ದನಿ ಕೇಳಿಸುತ್ತದೆ. ಯಾವ ಜಾತಿಯಲ್ಲಿ ಹುಟ್ಟಿದವನಾದರೂ ಜೀಸಸನನ್ನು, ಬೈಬಲ್ ಅನ್ನು ಒಪ್ಪಿದಡೆ ಕ್ರೈಸ್ತನಾದಂತೆ, "ಯಾವಕುಲವಾದಡೇನು ಶಿವಲಿಂಗವಿದ್ದವನೆ ಕುಲಜನಾಗುತ್ತಾನೆ."

ಹಿಂದೂ ಧರ್ಮವನ್ನು ಧಿಕ್ಕರಿಸಿ ಹೊರಬಂದ ಬಸವಣ್ಣನವರು ವಿಭೂತಿ ರುದ್ರಾಕ್ಷಿಗಳಿಲ್ಲದ ಹೊಲೆಯನನ್ನು ಅಸ್ಪೃಶ್ಯನನ್ನಾಗಿಯೇ ಕಂಡರು. ಅವುಗಳಿಲ್ಲದ ಬ್ರಾಹ್ಮಣನನ್ನೂ ಅಸ್ಪೃಶ್ಯನನ್ನಾಗಿಯೇ ಕಂಡರು. ಅವರು ಹೊಲೆಯರ ಹುಡುಗನೊಂದಿಗೆ ಬ್ರಾಹ್ಮಣ ಕನ್ಯೆಯ ಮದುವೆ ಮಾಡ ಹೋದುದು ಅಂತರ್ಜಾತೀಯ ವಿವಾಹವಲ್ಲ. ಆ ಎರಡೂ ಕುಟುಂಬದವರು ಲಿಂಗ, ವಿಭೂತಿ ಇತ್ಯಾದಿ ಲಾಂಛನಗಳಿಂದ ಅಲಂಕೃತರಾಗಿ ಶಿವಭಕ್ತರಾದ ಮೇಲೆಯೇ ಅವರ ವಿವಾಹ ಪ್ರಯತ್ನ ನಡೆದದ್ದು. ಒಬ್ಬ ಬ್ರಾಹ್ಮಣ ಹುಡುಗಿ, ಹೊಲೆಯರ ಹುಡುಗ ಇವರಿಬ್ಬರೂ ಮುಸಲ್ಮಾನರಾಗಿ ಪರಿವರ್ತನೆ ಹೊಂದಿದ ನಂತರ ಮದುವೆಯಾದರೆ ಅದು ಹೇಗೆ ಅಂತರ್ಜಾತೀಯ ವಿವಾಹವಾಗುವುದಿಲ್ಲವೋ ಇದೂ ಹಾಗೆಯೇ.

ಈ ದೇಶದ ಶ್ರೇಣೀಕೃತ ಜಾತಿವ್ಯವಸ್ಥೆಯನ್ನಾಗಲೀ, ವರ್ಗಭೇದವನ್ನಾಗಲೀ ಅವರು ವೈಚಾರಿಕವಾಗಿ ನೋಡಲೇ ಇಲ್ಲ. ಹಾಗೆ ನೋಡಲಿಕ್ಕೆ ಬೇಕಾದ ವಿಸ್ತೃತ ಸಾಮಾಜಿಕ ದೃಷ್ಟಿ ಅವರಿಗಿರಲಿಲ್ಲ. ಅವರು ಎಲ್ಲವನ್ನೂ, ಎಲ್ಲರನ್ನೂ ನೋಡುತ್ತಿದ್ದರು ಒಂದೇ ದೃಷ್ಟಿಯಿಂದ–ಭಕ್ತರು, ಭಕ್ತರಲ್ಲದವರು ಎಂದು. ಅವರು ಎಷ್ಟು ಭಾವುಕರಾಗಿದ್ದರೆಂದರೆ ಕೇವಲ ಲಾಂಛನವನ್ನು ನೋಡಿಯೇ ಒಬ್ಬನ ಉತ್ತಮಿಕೆ ಇಲ್ಲವೆ ಅಧಮಿಕೆಗಳನ್ನು ನಿರ್ಧರಿಸುತ್ತಿದ್ದರು. "ಶ್ರೀ ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂದೆ, ಇಲ್ಲದವರ ಭವಿಯೆಂಬೆ" ಎಂದು ಒಂದೆಡೆ ಹೇಳಿದರೆ ಇನ್ನೊಂದೆಡೆ "ಶ್ರೀ ವಿಭೂತಿಯ ಪೂಸದವರ ಶ್ರೀ ರುದ್ರಾಕ್ಷಿಯ ಧರಿಸದವರ ಎನಗೊಮ್ಮೆ ತೋರದಿರಯ್ಯ" ಎಂದಿದ್ದಾರೆ.

ಹೊಸ ಹೊಲೆಯರನ್ನು ಬಸವಣ್ಣನವರು ಸೃಷ್ಟಿಸಿರುವುದು ಸೋಜಿಗದ ಸಂಗತಿ. ಬ್ರಾಹ್ಮಣ್ಯದ ಬಂಧನದಿಂದ ಮುಕ್ತನಾಗಲು ಹಂಬಲಿಸಿ ಜನಿವಾರವನ್ನು ಕಿತ್ತೆಸೆದ

ಬಸವಣ್ಣನವರು ವಿಭೂತಿ ರುದ್ರಾಕ್ಷಿಗಳ ಸಂಕೋಲೆಗಳಿಗೆ ತಮ್ಮನ್ನು ತಾವೇ ತೆತ್ತು ಕೊಂಡುದು ಬದುಕಿನ ವ್ಯಂಗ್ಯಗಳಲ್ಲೇ ಅತ್ಯಂತ ದೊಡ್ಡ ವ್ಯಂಗ್ಯ. ಮತೀಯ ಉದ್ದೇಶದಿಂದ ಮಾಡಿದ ಈ ಅಸ್ಪೃಶ್ಯತಾ ನಿವಾರಣೆಯು ಅಂದಿನ ಸಮಾಜದ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಕಡೆಗೆ ವೀರಶೈವ ಸಮಾಜದ ಮೇಲೂ ಪರಿಣಾಮವಾಗಲಿಲ್ಲ. ಈ ಆಂದೋಲನವು ಬಸವಣ್ಣನವರ ವೈಯುಕ್ತಿಕ ಸ್ತರದಲ್ಲಿಯೇ ಸ್ಥಗಿತವಾಯಿತು. ಇದಕ್ಕೆ ಕಾರಣ ಅವರು ತಮ್ಮ ಮತೀಯ ಚಳುವಳಿಗೆ ಸಾಮಾಜಿಕ ಸ್ವರೂಪಕೊಡದೆ ಇದ್ದುದು. ಸಂಘಟನೆಯನ್ನು ನಿರ್ಮಾಣ ಮಾಡದೆ ಇದ್ದುದು.

ಬಸವಣ್ಣನವರ ಜೀವನದ ಬಗ್ಗೆ ಐತಿಹಾಸಿಕ ವಿವರಗಳಿಗಿಂತ ಪೌರಾಣಿಕ ವಿವರಗಳೇ ಹೆಚ್ಚು ಲಭ್ಯವಿದೆ. ಅವರ ವಚನಗಳ ಮತ್ತು ಅವರ ಸಮಕಾಲೀನರ ವಚನಗಳ ಸಹಾಯದಿಂದಲೇ ಅವರ ವ್ಯಕ್ತಿತ್ವವನ್ನು ನಾವು ಕಲ್ಪಿಸಿಕೊಳ್ಳಬೇಕಾಗಿದೆ. ಈ ವಚನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಎಲ್ಲ ಮನುಷ್ಯರಲ್ಲಿ ಇರುವಂತೆ ಅವರ ಬದುಕಿನಲ್ಲೂ ಅನೇಕ ದ್ವಂದ್ವಗಳನ್ನು ವಿರೋಧಾಭಾಸಗಳನ್ನು ಕಾಣುತ್ತೇವೆ. ಪುರಾಣದ ಬಸವಣ್ಣನವರು ಏನೇ ಆಗಿರಲಿ ಐತಿಹಾಸಿಕ ಬಸವಣ್ಣನವರಂತೂ ಮೂಲತಃ ಒಬ್ಬ ಪ್ರಗತಿಶೀಲರೇ ಆಗಿದ್ದಿರಬೇಕು. ವೈದಿಕ ಸಂಪ್ರದಾಯಗಳ ಡಾಂಭಿಕತೆಗೆ ಅಸಹ್ಯಪಟ್ಟು, ಪ್ರಾಣಿಬಲಿ, ಅಸ್ಪೃಶ್ಯತೆಗಳಂತಹ ಅಮಾನವೀಯ ಆಚರಣೆಗಳಿಂದ ನೊಂದು, ಆಧರ್ಮ–ಸಂಪ್ರದಾಯಗಳನ್ನೇ ಧಿಕ್ಕರಿಸಿ ಹೊರ ಬಂದ ಬಸವಣ್ಣನವರು ಒಬ್ಬ ಬಂಡಾಯಗಾರರೇ ಆಗಿದ್ದಿರಬೇಕು. ವೈದಿಕ ಧರ್ಮಕ್ಕೆ ಪರ್ಯಾಯವಾಗಿ ಎಂತಹ ಧರ್ಮಬೇಕು ಎಂಬುದರ ಅನ್ವೇಷಣೆ ಮಾಡಬೇಕಾಗಿದ್ದ ಬಸವಣ್ಣನವರು ವಿಭೂತಿ ರುದ್ರಾಕ್ಷಿಗಳತ್ತ, ಗುರುಲಿಂಗಜಂಗಮದತ್ತ ಹೇಗೆ ಮತ್ತು ಏಕೆ ಸರಿದರೆಂಬುವುದು ಒಂದು ಒಗಟು. ಒಂದು ವಿಸ್ಮಯ. ಜಾತಿ ವ್ಯವಸ್ಥೆಯನ್ನು ಧಿಕ್ಕರಿಸಿದ, ಜನಿವಾರವನ್ನು ಕಿತ್ತೆಸದ, "ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ" ಎಂದು ಹೇಳಿ ಉತ್ತಮಿಕೆಯ ಅಹಂಕಾರವನ್ನು ಗೆದ್ದ ಈ ಶರಣ "ಪರರ ಚಿಂತೆ ನಮಗೇಕಯ್ಯ. ನಮ್ಮ ಚಿಂತೆ ನಮಗೆ ಸಾಲದೆ, ಕೂಡಲ ಸಂಗಯ್ಯ ಒಲಿದಾನೊ ಒಲಿಯನೊ ಎಂಬ ಚಿಂತೆ ಹಾಸಲುಂಟು, ಹೊದೆಯಲುಂಟು" ಎಂದು ಹೇಳಿ ಧರ್ಮದ ಚಿಪ್ಪಿನೊಳಗೆ ಹುದುಗಿ ಶಸ್ತ್ರ ಸನ್ಯಾಸ ಮಾಡಿದ್ದು ಎಂಥ ವಿಪರ್ಯಾಸ.

ಬಸವಣ್ಣನವರ ಯೌವನ ಕಾಲದಲ್ಲಿ ಬಂಡಾಯಗಾರ ಬಸವಣ್ಣ ಮತ್ತು ಭಕ್ತ ಬಸವಣ್ಣ ಇವರಿಬ್ಬರ ಮಧ್ಯೆ ದೀರ್ಘಕಾಲ ತಿಕ್ಕಾಟ ನಡೆದಿರಬೇಕು. ಅವರ ಅಂತರಂಗ ವಿಕ್ಷಿಪ್ತವಾಗಿದ್ದಿರಬೇಕು. ಅಂತಿಮವಾಗಿ ಭಕ್ತನು ಬಂಡಾಯಗಾರನನ್ನು ಪಕ್ಕಕ್ಕೆ ತಳ್ಳಿರಬೇಕು. ಅವರ ಬದುಕಿನಲ್ಲಿ ಹೀಗೆ ದ್ವಂದ್ವಗಳೋ ಅವರ ವಿಚಾರಗಳಲ್ಲೂ

ಅನೇಕ ವೈರುಧ್ಯಗಳಿವೆ. ಅಂತರಂಗ ಶುದ್ಧಿ ಬಹಿರಂಗ ಶುದ್ಧಿಗಳಿಗೆ ಅತೀವ ಮಹತ್ವ ಕೊಟ್ಟ ಬಸವಣ್ಣನವರೇ "ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯಿದ್ದರೂ ಲಿಂಗವೊಂದಿದ್ದರೆ "ಅವರನ್ನು ಸಂಗನೆಂಬೆ" ಎಂದಿದ್ದಾರೆ. "ದೇವನೊಬ್ಬ ನಾಮಹಲವು" ಎಂದವರೇ "ಶಿವಮಯ ವಿಷ್ಣುವಲ್ಲ. ವಿಷ್ಣುಮಯ ಶಿವನಲ್ಲ" ಎಂದಿದ್ದಾರೆ. "ದಯವೇ ಧರ್ಮದ ಮೂಲವಯ್ಯಾ" ಎಂಬ ಚಿರಂತನ ಸತ್ಯವನ್ನು ಸಾರಿದವರೇ ಅನ್ಯ ದೈವವನ್ನು ಪೂಜಿಸುವವರ "ಬಾಯ ಕೆನ್ನೆವರೆ ಸೀಳದಲ್ಲದೆ ಮುನಿಸು ಹೋಗದು" ಎಂದು ನಿರ್ದಯವಾಗಿ ಹೇಳಿದ್ದಾರೆ. "ಶ್ರೀ ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ" ಎಂದು ಹೇಳಿ ಶಿವ ಭಕ್ತರಿಗೆ ವಿಭೂತಿ ರುದ್ರಾಕ್ಷಿಗಳ ಹಂಗನ್ನು ಒಪ್ಪಿಕೊಳ್ಳುವ ಅವರು "ಬಡ ಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ" ಎಂದು ಹೇಳಿ ಬಡ ಬ್ರಾಹ್ಮಣನ ಜನಿವಾರದ ಹಂಗನ್ನು ಛೇಡಿಸುತ್ತಾರೆ. ಒಂದು ಕಡೆ ವೇದ ಪ್ರಾಮಾಣ್ಯವನ್ನು ತಿರಸ್ಕರಿಸುವ ಅವರು ಇನ್ನೊಂದು ಕಡೆ ಶಿವ ಪಾರಮ್ಯದ ಸಮರ್ಥನೆಗಾಗಿ " 'ಭರ್ಗೋದೇವಸ್ಯ ಧೀಮಹಿ' ಎಂಬುದಾಗಿ ಕೂಡಲ ಸಂಗನಲ್ಲದಿಲ್ಲೆಂದುದು ವೇದ" ಎಂದು ಗಾಯಿತ್ರಿ ಮಂತ್ರವನ್ನೇ ಪ್ರಮಾಣವಾಗಿ ಒಪ್ಪಿಕೊಳ್ಳುತ್ತಾರೆ. ವೈದಿಕ ಧರ್ಮದಲ್ಲಿನ ಅವೈಚಾರಿಕ ಅಂಶಗಳನ್ನು ತಿರಸ್ಕರಿಸಿದವರೇ ತಾವು ಕಂಡುಕೊಂಡ ನೂತನ ಧರ್ಮದಲ್ಲಿ ಅವೇ ಅವೈಚಾರಿಕ ಅಂಶಗಳನ್ನು ಉತ್ಸಾಹದಿಂದ ಪ್ರತಿಪಾದಿಸುತ್ತಾರೆ. ಜಾತಿ ಪದ್ಧತಿಯನ್ನು, ಅಸ್ಪೃಶ್ಯತೆಯನ್ನು ತಿರಸ್ಕರಿಸಿದ ಅವರು ನೂತನ ಜಾತಿ ಪದ್ಧತಿಯನ್ನು ನೂತನ ಹೊಲೆಯರನ್ನು ಹೇಗೆ ಸೃಷ್ಟಿಸಿದರೆಂಬುದನ್ನು ಈ ಹಿಂದೆಯೇ ಪ್ರಸ್ತಾಪ ಮಾಡಿದ್ದೇವೆ. ವೈದಿಕರ ಜನಿವಾರವನ್ನು ಬಿಸುಟರು ಅದರ ಜಾಗದಲ್ಲಿ ಶಿವದಾರವನ್ನು ಧರಿಸಿದರು. 'ನಾವು ನಡೆದಾಡುವ ದೇವತೆಗಳೆಂದು ಬೀಗುತ್ತಿದ್ದ ಬ್ರಾಹ್ಮಣರನ್ನು ಖಂಡಿಸಿದರು. "ಜಂಗಮವ ಹರನೆಂದು ನಂಬದೆ ನರನೆಂದು ಭಾವಿಸಿದಡೆ ನರಕ ತಪ್ಪದು" ಎಂದು ಹೇಳಿ ನವ ಬ್ರಾಹ್ಮಣ ವರ್ಗವನ್ನು ಸೃಷ್ಟಿಸಿದರು.

ಅವರ ಭಾವುಕತೆ, ಮತೀಯ ನಿಷ್ಠೆ ಮತ್ತು ವೈರುಧ್ಯಗಳನ್ನು ಮೀರಿ ಅವರ ಅಸಾಧಾರಣ ಚೇತನ ನಮ್ಮನ್ನು ಆಕರ್ಷಿಸುತ್ತದೆ. ಅವರ ಪ್ರಭಾವದ ಮುದ್ರೆ ಜನಸಾಮಾನ್ಯರಿಂದ ಹಿಡಿದು ಬುದ್ಧಿಜೀವಿಗಳವರೆಗೆ ಬಿದ್ದಿದೆ. ಅವರ ಬದುಕಿನ ಕೆಲವಂಶಗಳು ಮತ್ತು ಅವರ ಅನೇಕ ವಿಚಾರಗಳು ಇಂದಿಗೂ ಅರ್ಥಪೂರ್ಣವಾಗಿವೆ. ಇನ್ನು ಮುಂದೆಯೂ ಸುಸಂಗತವಾಗಿರುತ್ತವೆ. ಅವರ ಧರ್ಮನಿಷ್ಠೆ, ನೈತಿಕ ಪ್ರಜ್ಞೆ, ನಿರಹಂಕಾರ, ಸೇವಾಮನೋಭಾವ ಮತ್ತು ಸರಳತೆಗಳು ಅವರ ವ್ಯಕ್ತಿತ್ವಕ್ಕೆ ಇನ್ನಿಲ್ಲದ ಮೆರುಗನ್ನು ಕೊಟ್ಟಿವೆ. ಅವರ ಪ್ರಾಮಾಣಿಕತೆ ಪ್ರಶ್ನಾತೀತ, ಅವರದು ಮಾರ್ಗದರ್ಶಕ ಪ್ರವೃತ್ತಿ. ಅವರ ಬದುಕೇ ಒಂದು ತೆರೆದ ಪುಸ್ತಕ. ಅವರು ಯಾವುದನ್ನು ಸತ್ಯವೆಂದು ತಿಳಿದಿದ್ದರೋ ಅದಕ್ಕಾಗಿ ತ್ರಿಕರಣ ಶುದ್ಧಿಯಿಂದ ಶ್ರಮಿಸಿದರು. ತಾವು

ನಂಬಿದ ಮೌಲ್ಯಗಳನ್ನು ಯಾವ ಕಾರಣಕ್ಕೂ, ಎಂತಹ ಪ್ರಲೋಭನೆಗೂ ಬಿಟ್ಟುಕೊಡಲಿಲ್ಲ. ರಾಜಿ ಮಾಡಿಕೊಳ್ಳಲಿಲ್ಲ ಅಹಂಕಾರವೆಂದರೇನೆಂಬುದನ್ನು ತಿಳಿಯದ ಹಿರಿಯ ಜೀವ ಅದು, ಪ್ರಾಯಶಃ ಬಸವಣ್ಣನವರ ವಚನಗಳಲ್ಲಿ ಕಂಡುಬರುವಷ್ಟು ನಿರಹಂಕಾರದ ಆತ್ಮ ನಿವೇದನೆಯು ಜಗತ್ತಿನ ಧಾರ್ಮಿಕ ಸಾಹಿತ್ಯದಲ್ಲಿ ಮತ್ತೊಂದು ಏಣಿಸಿಗಲಾರದು. ತಾವು ಯಾವುದನ್ನು ನೀತಿ ಎಂದು ತಿಳಿದಿದ್ದರೋ ಆ ನೈತಿಕತೆಯನ್ನು ಇನ್ನೊಬ್ಬರ ಮೇಲೆ ಹೇರದೆ ತಮ್ಮ ಮೇಲೆ ತಾವೇ ಹೇರಿಕೊಂಡು ಅಂತರಂಗ ಶುದ್ಧಿ ಬಹಿರಂಗ ಶುದ್ಧಿಗಳನ್ನು ಸಾಧಿಸಿದವರು ಅವರು.

ಅವರ ವಚನಗಳ ಸಾಹಿತ್ಯಕ ಮೌಲ್ಯ ಅಸಾಮಾನ್ಯವಾದುದು. ಅವರ ಅಂತರಂಗದ ತುಮುಲಗಳನ್ನು, ಭಕ್ತಿ ಭಾವವನ್ನು ಅಭಿವ್ಯಕ್ತಿಗೊಳಿಸಿರುವ ಕೆಲವು ವಚನಗಳು ನಮ್ಮನ್ನು ಬೆರಗುಗೊಳಿಸುತ್ತವೆ. ನಮ್ಮ ಅಂತರಂಗವನ್ನು ಸ್ವಚ್ಛಗೊಳಿಸುತ್ತವೆ. ಅವರ ಬದುಕು ಎಷ್ಟು ಅಕೃತ್ರಿಮವೋ, ಸರಳವೋ ಅವರ ವಚನಗಳ ಭಾಷೆಯೂ ಅಷ್ಟೇ ಅಕೃತ್ರಿಮ. ಸರಳ.

ಅವರು ದಾಸೋಹ ಜೀವಿ. ನಾನು 'ಶರಣರ ತೊತ್ತಿನ ತೊತ್ತು' ಎಂಬ ಭಾವದಿಂದ ನಡೆಸುತ್ತಿದ್ದ ದಾಸೋಹವು ಮೇಲ್ವರ್ಗದಿಂದ ಬಂದ ಶರಣರ ಸೇವೆಗಿಂತ ಸಾಮಾಜಿಕವಾಗಿ ತೀರ ಕೆಳಸ್ತರದಿಂದ ಬಂದ ಶರಣರ ಸೇವೆಗಾಗಿಯೇ ಹೆಚ್ಚು ಕಟಿಬದ್ಧವಾಗಿತ್ತು. ಇವೆಲ್ಲಕ್ಕಿಂತ ಮಿಗಿಲಾಗಿ ಅವರು ಅಸ್ಪೃಶ್ಯ ಭಕ್ತರನ್ನೂ ನೋಡಿದ ರೀತಿ ಅವರ ಜೀವನದ ಮಹಾ ಸಾಧನೆ.

ಇಷ್ಟೆಲ್ಲ ಗುಣಗಳಿಂದ ಸಂಪನ್ನರಾದ ಬಸವಣ್ಣನವರ ಕ್ರಿಯಾಶೀಲತೆ ಸಮಷ್ಟಿ ಸಮಾಜಕ್ಕೆ ದಕ್ಕದೆ ಹೋದುದು ಒಂದು ಮಹಾದುರಂತ. ಅವರ ಅಸಾಧಾರಣ ಚೈತನ್ಯ, ಅವಿಶ್ರಾಂತ ದುಡಿಮೆ, ಕಾಳಜಿಗಳು ಕೇವಲ ಶರಣ ಮುಖವಾಗಿ ಸಾಗಿದವು.

ನಮಗೆ ಅವರ ಕಾಲದ ಇತಿಹಾಸಕ್ಕಿಂತ ಪುರಾಣವೇ ಹೆಚ್ಚು ಉಪಲಬ್ಧವಿರುವುದರಿಂದ ಅವರನ್ನು ಕುರಿತಾಗಿ ನಮಗಿರುವ ಅನೇಕ ಪ್ರಶ್ನೆಗಳಿಗೆ, ಅನುಮಾನಗಳಿಗೆ ಸಮಾಧಾನಕರ ಉತ್ತರಗಳಿಲ್ಲ ಬಸವಣ್ಣನವರನ್ನು ಮತ್ತು ಎಲ್ಲ ವಚನಕಾರರನ್ನು ಕುರಿತು ಸಾಕಷ್ಟು ಚರ್ಚೆ, ಜಿಜ್ಞಾಸೆ ನಡೆಯಬೇಕಾಗಿದೆ. ಅಂತಹ ಚರ್ಚೆ ವಸ್ತುನಿಷ್ಠವಾಗಿ ಮತ್ತು ನಿರುದ್ವಿಗ್ನವಾಗಿ ನಡೆಯಬೇಕಾಗಿದೆ.

## ಕೆಲವು ರಚನೆಗಳು

೧

ನನ್ನ ಮಿತಿಗಳ ನಾನು ಬಲ್ಲೆ,
ಅದೇ ನನ್ನ ಸಾಧನೆ.

೨

ಆಸಕ್ತಿಗಳು ಹೇರಳ,
ಅವಕಾಶಗಳು ವಿರಳ,
ಅನುಕೂಲಗಳು ಸೊನ್ನೆ.
ನನ್ನ
ಅಲ್ಪಾಯು ಪ್ರತಿಭೆ ಮುರಟಿದ್ದರೆ
ಕಾರಣವಿದು ಗೆಳೆಯಾ.

೩

ನಾವು ಬೀಳುವ ಪ್ರಪಾತದ ಆಳ
ನಾವು ಏರುವ ಎತ್ತರದಲ್ಲಿ ಅಡಗಿದೆ.
ನಮ್ಮ ನಿರಸನಗಳ ಮೂಲ
ನಮ್ಮ ಭ್ರಮೆಗಳ ಉದರದಲ್ಲಿ ಹುದುಗಿದೆ.

೪

ನಾನು ಪ್ರಕ್ಷುಬ್ಧಕ್ಷಣಗಳನ್ನು ಪ್ರೀತಿಸುತ್ತೇನೆ.
ಆಗ,
ನನ್ನ ನಾನು ಅರಿಯುತ್ತೇನೆ,
ಇತರರನ್ನು ತಿಳಿಯುತ್ತೇನೆ.
ಜಗತ್ತನ್ನು ಅರ್ಥೈಸುತ್ತೇನೆ,
ಮಾತುಗಳನ್ನು
ಅರ್ಥಗಳನ್ನು
ಅವುಗಳ ನಡುವಿನ ಕಂದರವನ್ನು ಅನುಭವಿಸುತ್ತೇನೆ.

---

ಎಚ್. ಎಸ್. ಸುಜಾತಾ, 53, 'ಸುಹಾಸ', 6ನೇ ಬ್ಲಾಕ್,
ಕುವೆಂಪುನಗರ, ಮೈಸೂರು-570 023

೫

ಪ್ರತಿಯೊಂದು ನಿಯಮಕ್ಕೂ ಅಪವಾದವಿದೆ.
ಅಷ್ಟು ಮಾತ್ರವಲ್ಲ,
ನಿಯಮವನ್ನು
ಸರಿಯಾದ ವೇಳೆಯಲ್ಲಿ ಮೀರುವವರೇ
ನಿಜವಾಗಿ ನಿಯಮದ ಪಾಲಕರು.

೬

ಹಾದಿಯಿಲ್ಲದೆಡೆ ಹಾದಿ ಮಾಡಿದವ,
ತಾನೇ ಮೊದಲು ನಡೆದವ,
ಮೆಚ್ಚುಗೆ ಪಡೆಯುತ್ತಾನೆ.
ನಿಂದೆಯನ್ನೂ ಪಡೆಯುತ್ತಾನೆ.
ಮೆಚ್ಚಿದವರು ಸುಮ್ಮನಿದ್ದಾರು
ಅಥವಾ
ಅನುಸರಿಸಿಯಾರು.
ನಿಂದಿಸಿದವರು ಮಾತ್ರ
ಹೆಚ್ಚಾಗಿ, ಹುಚ್ಚಾಗಿ ಅನುಸರಿಸುತ್ತಾರೆ.
ಲೋಕಜೀವನ ಎಂಥ ವಿಚಿತ್ರ !



—ಎಚ್. ಎಸ್. ಸುಜಾತಾ

ಓದಿ :

**ಅಧ್ಯಯನ**—ರಾಜೇಂದ್ರ ಚೆನ್ನಿ (ವಿಮರ್ಶೆ)

**ಶಕ್ತಿಶಾರದೆಯ ಮೇಳ**—ಡಿ. ಆರ್. ನಾಗರಾಜ್ (ಪಿ.ಎಚ್.ಡಿ. ಪ್ರಬಂಧ)

**ಶ್ರಾವಣ ಮಧ್ಯಾಹ್ನ**—ಜಯಂತ ಕಾಯ್ಕಿಣಿ (ಕವನ ಸಂಕಲನ)

# ಒಂದು ನೆನಪು

ಮಲ್ಲಿಗೆ ಮುಡಿಸಿದ ಸರದಾರ,
ಮೆಲ್ಲಗೆ ನಕ್ಕನೋ ಜತೆಗಾರ,
ಮುಡಿಸಿದ ಮಲ್ಲಿಗೆ ಮೂಸುತ ಬಾಗುತ
ಕಿವಿಯಲಿ ಉಸುರಿದ ಗೆಣೆಕಾರ.

"ಮುಡಿಯಲಿ ಮಲ್ಲಿಗೆ ಘಮ ಘಮವು,
ತನುವೆ ಕಸ್ತೂರಿ ಪರಿಮಳವು"
ಇನಿಯದ ನುಡಿಗೆ ಬಾಗಿದ ಮೊಗವಸು
ಹಿಡಿದನು ಪ್ರಿಯಕರ ಕರದಲ್ಲಿ.

ರಾಗವನೆಲ್ಲವ ಕಣ್ಣಲೆ ಒಸರುತ
ಕೇಳಿದ ಪ್ರಿಯೆಯನು ಪ್ರೇಮದಲಿ,
"ಶಿರವದು ಬಾಗಿದೆ ಕಾರಣವೇನು,
ನಾ ಮುಡಿಸಿದ ಮಲ್ಲಿಗೆ ಭಾರಹುದೆ ?"

ನಾಚಿದ ಮೋರೆಯು ತುಸುಕೆಳ ಬಾಗಿತು
ಇನಿಯನ ಮಾತಿನ ಮಲ್ಲಿಗೆಗೆ.
ಬಾನಿನ ಚಂದಿರ ಇಣುಕಿದ ಮೆಚ್ಚಿದ
ಮಲ್ಲಿಗೆ ಮುಡಿಸಿದ ಆ ಪರಿಗೆ.

೦ ೦ ೦

ಅಡಿಯಲಿ ಮಲ್ಲಿಗೆ, ಮುಡಿಯಲಿ ಮಲ್ಲಿಗೆ.
ಅಡಿ ಮುಡಿ ಮಲ್ಲಿಗೆಯೋ
ಅಳಿಯದೆ ಉಳಿಯಲಿ ಎಂದೆಂದಿಗೂ ಈ
ಮುಡಿದಿಹ ಮಲ್ಲಿಗೆಯು.

---

ಕನಕ ಅತುಲ್, 10 'ಬಿ' ಅರಗರ ಹುಸೇನ್ ಗಂಝ್ ಲಖನೌ,
ಉತ್ತರ ಪ್ರದೇಶ–226001.

ತನುವಲಿ ಮಲ್ಲಿಗೆ, ಮನದಲಿ ಮಲ್ಲಿಗೆ
ಕಸ್ತೂರಿ ಮಲ್ಲಿಗೆಯೋ
ಜೇನನು ಶ್ರವಿಸುವ, ರಾಗವ ನುಡಿಸುವ
ಶೃಂಗಾರದ ಮಲ್ಲಿಗೆಯು.

ಕಾಡಲೂ ಮಲ್ಲಿಗೆ, ಊರಲೂ ಮಲ್ಲಿಗೆ
ಎಲ್ಲೆಲ್ಲೂ ಮಲ್ಲಿಗೆಯೋ
ಕಾಮನ ಶರದಲಿ, ಈಶೆಯ ಬ (ವ) ನದಲಿ
ಬೆಳ್ಳನೆ ಮಲ್ಲಿಗೆಯು

ಶರ ಬಿಟ್ಟೊಡನೆಯೆ ಕಾಮ, ಈಶನ
ಕಣ್ಣೇ ಮಲ್ಲಿಗೆಯೋ
ಈಶನ ದೃಷ್ಟಿ ನೆಟ್ಟಾಕ್ಷಣ, ಈಶೆಯ
ಮೈಯೆಲ್ಲಾ ಮಲ್ಲಿಗೆಯೆ

o o o o

ಬಾಗಿತು ಮಲ್ಲಿಗೆ, ಬೀಗಿತು ಮಲ್ಲಿಗೆ
ಮುಡಿಯೇರಿತು ಮಲ್ಲಿಗೆಯು.
ಚಿಗುರಿದ ಬಳ್ಳಿಯ ಹರೆ ಹರೆಯಲ್ಲೂ
ಬಿರಿಯಿತು ಮಲ್ಲಿಗೆಯು.

ಮಲ್ಲಿಗೆ ಮುಡಿಸಿದ ನಿನ್ನಯ ಕರಗಳು
ಎಂದೆಂದೂ ನನಗಿರಲಿ.
ಮಲ್ಲಿಗೆ ನುಡಿಗೆ ಒಡ್ಡುವ ಕಿವಿಗಳು
ನನ್ನವೆ ಆಗಿರಲಿ.

●

ಹಾ. ಮಾ. ಕನಕ

# ಸವಿತಾ ಅವರ ನಾ ಬರುತ್ತೇನು ಕೇಳು

—ಬಂದಗದ್ದೆ ರಾಧಾಕೃಷ್ಣ

ಕವಿಯ ಕರ್ಮವಾದರೆ ಕೇವಲ ಭಾವನೆ; ಅದು ಒಂದು ಬಗೆಯ ಸಮಾಧಿ. ತಾಕಿಕವಾದ ಉಪಯೋಗದ ದೃಷ್ಟಿ ಅವನಿಗೆ ಎಳ್ಳಷ್ಟೂ ಇಲ್ಲ. ಅವನ ಶುದ್ಧ ದೃಷ್ಟಿಗೆ ಸಿಕ್ಕಿದ ಕೂಡಲೇ ವಿಶ್ವದ ವಸ್ತುಗಳೆಲ್ಲ ತಮ್ಮ ಪರಿಚಿತವಾದ ಮೇಲು ಮುಸುಕನ್ನು ಕಳಚುತ್ತವೆ; ಒಳಗಿನ ವಿಶೇಷ ರೂಪ ಪ್ರಕಾಶವಾಗುತ್ತದೆ. ಮೇಲು ನೋಟಕ್ಕೆ ಅತಿ ವಿಕೃತವೆಂದು ತೋರುವುದರಲ್ಲಿ ಕೂಡಾ ಪರಮ ರಮಣೀಯತೆಯನ್ನು, ಅತಿ ತುಚ್ಛ ವೆಂದು ತೋರುವುದರಲ್ಲಿ ಕೂಡಾ ಅರ್ಥ ಮಹತ್ವವನ್ನು ಕವಿಯ ಪ್ರತಿಭಾ ದೃಷ್ಟಿ ಕಾಣುತ್ತದೆ, ಕಾಣಿಸುತ್ತದೆ. ಈ ಬಗೆಯ ಅಪೂರ್ವ ದರ್ಶನವನ್ನೇ ಕವಿಯ ವಾಣಿ ರೂಪಿಸುವುದು. ಅದ ಕಾರಣವೇ ನಾವು ದಿನ ದಿನವೂ ಕಂಡು ಕೇಳಿದ ಸಾಮಾನ್ಯಾರ್ಥ ಗಳು ಕವಿ ಪ್ರತಿಭೆಯ ಬೆಳಕಿನಲ್ಲಿ ಹೊಳೆದಾಗ ಹೊಸ ಹೊಸ ತೆರೆನಾಗಿ ಕಾಣಿಸುತ್ತವೆ– ಕವಿತೆಯ ಆಕಾರದ ಬಗೆಗೆ ಹೇಳುತ್ತ ಭಾರತೀಯ ಕಾವ್ಯಮೀಮಾಂಸೆಯಲ್ಲಿ ತೀ. ನಂ. ಶ್ರೀಕಂಠಯ್ಯ ಬರೆಯುತ್ತಾರೆ.

ಸವಿತಾ ನಾಗಭೂಷಣ ಅವರ ಕವಿತೆಗಳನ್ನು ಓದಿದಾಗ ಮೇಲಿನ ಮಾತುಗಳು ನೆನಪಾಗುತ್ತವೆ. ದಿನ ನಿತ್ಯ ನಾವು ಬಳಸುವ ಶಬ್ದಗಳನ್ನೇ ಅವರಿಲ್ಲಿ ಬಳಸಿದ್ದಾರೆ. ಸರಳವಾದ ಭಾಷೆಯಲ್ಲಿ ಕವಿತೆ ಬರೆಯುತ್ತಾರೆ. ಇವರ ಕವಿತೆಗಳಲ್ಲಿ ಕಾಣುವ ವಿಶೇಷ ವೆಂದರೆ ಹೊಸ ಹೊಸ ಕಲ್ಪನೆಗಳು. ಮೋಡ, ಮಿಂಚು, ನಕ್ಷತ್ರ, ಬೆಟ್ಟ, ಕಣಿವೆ ಮುಂತಾದವುಗಳನ್ನು ಉಪಮೆಗಳಾಗಿ ಬಳಸುತ್ತ, ಪ್ರೀತಿಯ ಬಗೆಗೆ, ಹುಡುಗಿಯ ಬಗೆಗೆ, ಹುಡುಗನ ಬಗೆಗೆ ತಮ್ಮ ಕಾವ್ಯದ ಬಗೆಗೆ ಹೇಳುತ್ತಾರೆ.

ತಮ್ಮ ಪದ್ಯಗಳ ಬಗೆಗೆ ಸವಿತಾ ನಾಗಭೂಷಣ ಹೀಗೆ ಹೇಳಿಕೊಳ್ಳುತ್ತಾರೆ. "ಬೆಟ್ಟ ಹತ್ತುವುದು, ನದಿಯಲ್ಲಿ ಮುಳುಗುವುದು, ನಕ್ಷತ್ರಗಳನ್ನು ಎಣಿಸುವುದು, ಆಕಾಶವನ್ನು ದಿಟ್ಟಿಸುವುದು, ಕಣಿವೆ ಕಂದರಗಳಲ್ಲಿ ಮುಗ್ಗರಿಸುವುದು, ಸೂರ್ಯನನ್ನು ಭೇಟಿ ಮಾಡುವುದು, ಬಣ್ಣಗಳನ್ನು ಹಿಡಿಯುವುದು, ಮಳೆಯಲ್ಲಿ ನೆನೆಯುವುದು, ಮೋಡಗಳ ಜೊತೆ ಓಡುವುದು, ಜೊತೆ ಜೊತೆಗೆ ಪ್ರೀತಿಸುವುದು, ಪ್ರೀತಿಸಲ್ಪಡುವುದು

---

ಬಂದಗದ್ದೆ ರಾಧಾಕೃಷ್ಣ, ಬಂದಗದ್ದೆ, ಕೆಳದಿ ಅಂಚೆ, ಸಾಗರ, ಶಿವಮೊಗ್ಗ ಜಿಲ್ಲೆ

ನನಗೆ ತುಂಬಾ ಇಷ್ಟವಾದದ್ದು. ನಾನನದನ್ನು ನನ್ನ ಪದ್ಯಗಳಲ್ಲಿ ಮಾಡಿದ್ದೇನೆ"—ಈ ಸಂಕಲನದ ಬಹುಪಾಲು ಪದ್ಯಗಳ ವಸ್ತು ಪ್ರೀತಿ. ಪ್ರೀತಿ ಏನೆಂದು ತಿಳಿಯಲು "ಕಡಲನ್ನು ನೋಡಿದ್ದೀರಾ? ಹಾಗಾದರೆ ಸುಮ್ಮನಿರಿ"—ಎನ್ನುತ್ತಾರೆ. ಪ್ರೀತಿಯನ್ನು ಪರಿಚಯ ಮಾಡಿಕೊಳ್ಳಲು ಆಗಸವನ್ನು ಕಣ್ಮುಂದೆ ಕರೆಯಲು ಸೂಚಿಸುತ್ತಾರೆ. ಪ್ರೀತಿ ಪ್ರಿಯವಾಗಲು ಕಾರಣ ಅದಕ್ಕೆ ಬಣ್ಣ, ರುಚಿ, ವಾಸನೆ ಇರುವುದರಿಂದ ಎನ್ನುತ್ತಾರೆ.

'ಪ್ರೀತಿ'
ಪ್ರಕೃತಿ, ಅದು ಹೂವಾಗುತ್ತದೆ.
ಕಾಯಾಗುತ್ತದೆ. ಹಣ್ಣಾಗುತ್ತದೆ.
ಮತ್ತೆ ಬೀಜವಾಗುತ್ತದೆ.
(ಪ್ರೀತಿ, ಕವಿತೆಯಲ್ಲಿ)

ನಿತ್ಯ ನೂತನವಾದದ್ದು ಎಂದು ಕರೆಸಿಕೊಳ್ಳುವ ಪ್ರೀತಿ ನಿರಂತರವಾದದ್ದೂ ಕೂಡಾ. ಋತು ಚಕ್ರ ಉರುಳಿ ಉರುಳಿ ಹೂ, ಕಾಯಿ, ಹಣ್ಣುಗಳನ್ನು ಯಾವತ್ತೂ ನೀಡುತ್ತಿರುವಂತೆ ಪ್ರೀತಿ ಯಾವತ್ತೂ ಇರುತ್ತದೆಯೆಂಬುದನ್ನು ಹೇಳುವ ಈ ರೀತಿಯೇ ಇಲ್ಲಿನ "ಕಾವ್ಯಕಲೆ". ಇಲ್ಲಿ ಪ್ರೀತಿ ತಾಯಿ-ಮಗು, ಗಂಡು-ಹೆಣ್ಣುಗಳ ನಡುವೆ ಮಾತ್ರ ಸೀಮಿತಗೊಳ್ಳುವುದಿಲ್ಲ.

ನಾನು ನನ್ನ ದೇಶದ ಗಡಿಯನ್ನು
ಕೊಳೆಯದ ಹೆಣಕ್ಕೆ ಹೋಲಿಸುತ್ತೇನೆ.
ನಿತ್ಯ ಕಾವಲು ಕಾಯುವ ನೂರು
ಕಣ್ಣುಗಳಿಗಾಗಿ ದುಃಖಿಸುತ್ತೇನೆ.

ಎಂದು 'ಯುದ್ಧ' ಕವಿತೆ ಪ್ರಾರಂಭವಾಗುತ್ತದೆ. ಯುದ್ಧ ನನ್ನನ್ನು ಕಂಗೆಡಿಸುತ್ತದೆ! ಬುದ್ಧ ನನ್ನನ್ನು ಸಂತೈಸುತ್ತಾನೆ!—ಎಂದು ಕೊನೆಗೊಳ್ಳುತ್ತದೆ. ಅತಿಭಾವುಕತೆಯಿಂದ ದೇಶಭಕ್ತಿಯೊಂದನ್ನು ರಚಿಸುವುದಕ್ಕೂ, ದೇಶದ ಬಗೆಗೆ ತನಗಿರುವ ಕಾಳಜಿಯನ್ನು ಹೀಗೆ ಪದ್ಯವಾಗಿಸುವುದಕ್ಕೂ ಮತ್ತು ಅದರ ಪರಿಣಾಮಕ್ಕೂ ಇರುವ ವ್ಯತ್ಯಾಸಗಳನ್ನು ಇಲ್ಲಿ ಕಾಣಬಹುದು.

ಯಾಕೆ ಬರಲಿಲ್ಲ ?, ನಾ ಬರುತ್ತೇನು ಕೇಳು. ನಾನು ಮತ್ತು ಅವನು, ಈ ಗೆಳೆತನ...., ಬಿಕ್ಕಳಿಸಿ ಅಳದಿರಲಿ ಕವಿತೆಗಳಲ್ಲಿ ಹುಡುಗನೊಂದಿಗೆ ಸಂಪಾದಿಸುವ

ಧಾಟಿಯಲಿ ಛಾತಿಯಿದೆ. ತನ್ನ ಹಾದಿಯನ್ನು ತಾನು ಕಂಡು ಕೊಂಡರೂ ಈ ಮನಸ್ಸು ಹುಡುಗನ ಸ್ನೇಹವನ್ನು ಪ್ರೀತಿಯನ್ನು ಬಯಸುತ್ತದೆ.

ತಾರೆ, ಚಂದ್ರಮ, ಕೋಲ್ಮಿಂಚು, ಮೋಡ, ಜಲ, ಕೋಗಿಲೆ ಮುಂತಾದವು ಕವಿತೆ ಬರೆಯಲಿಕ್ಕೆ ಈ ಕವಯಿತ್ರಿಗೆ ಬೇಕೇ ಬೇಕೆಂದೇನೂ ಇಲ್ಲ.

ಕಲ್ಪನೆಗೂ ಮೀರಿದ ಬದುಕು
ಕವನಿಸಲಿಕ್ಕೆ ಕೈ ತುಂಬಾ ಸರಕು
(ನೀವೇಕೆ ಬೇಕು)

—ಎನ್ನುತ್ತಾರೆ. 'ಸಂವಾದ' ಪದ್ಯದಲ್ಲಿ ನನ್ನ ಮುದ್ದು ಕವಿತೆಯ। ಕಳೇಬರವನ್ನು ಇರುವೆಗಳು। ಮೆರವಣಿಗೆಯಲ್ಲಿ ಒಯ್ಯುತ್ತಿವೆ। ಸಹಾಯ! ನನಗೆ ಹೆದರಿಕೆಯಾಗುತ್ತಿದೆ। —ಎನ್ನುವಾಗ ಅದೊಂದುಭಯಾನಕ ಸನ್ನಿವೇಶದ ಚಿತ್ರಣವಾದರೂ ಓದಲು ಖುಷಿಯೆನಿಸುತ್ತದೆ. ಈ ರೀತಿಯ ಹೊಸ ಕಲ್ಪನೆಯೇ ಈ ಖುಷಿಗೆ ಕಾರಣವಿರಬಹುದು.

ತಾರೆಯರು, ಮೋಡಗಳು
ಪದ್ಯವಾದವು.
ಕಣ್ಣುಗಳು ಮುಂಗುರುಳು
ಪದ್ಯವಾದವು

—ಪದ್ಯವಾಗಲಿಲ್ಲ ಕವಿತೆಯಲ್ಲಿ ಹೀಗೆ ಹೇಳುತ್ತ ತಾನು ಮಾತ್ರ ಪದ್ಯವಾಗಲಿಲ್ಲ ಎನ್ನುತ್ತಾರೆ.

ಅದೋ....... .ಈ ಮೂಲೆಯಲ್ಲಿ
ಬೆಂದು ಬೂದಿಯಾದ ಕವಿತೆಗಳ
ತುಣುಕುಗಳಿವೆ ಆಯ್ದುಕೋ.

—'ನೋಡ ಬೇಡ ತಿರುಗಿ' ಕವಿತೆಯಲ್ಲಿ ಹೇಳುತ್ತಾರೆ. "ನನ್ನ ಕವಿತೆ" ಕವಿತೆಯಲ್ಲಿ ಕವಯಿತ್ರಿ ತನ್ನ ಕಾವ್ಯ ಸೃಷ್ಟಿಯ ಬಗೆಗೆ ಸ್ವತಃ ವಿಮರ್ಶೆ ಮಾಡಿಕೊಳ್ಳುತ್ತಾರೆ. ಇನ್ನಿತರ ಪದ್ಯಗಳಲ್ಲಿ ಹುಡುಗಿಯ ಅಂತರಂಗವನ್ನು ಬಿಚ್ಚಿಡಲು ಪ್ರಯತ್ನಿಸುತ್ತಾರೆ.

ಈ ಸಂಕಲನದ ಕವಿತೆಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ಕವಯಿತ್ರಿ ಮತ್ತು ಕಾವ್ಯ ಹುಡುಗ ಮತ್ತು ಪ್ರೀತಿ. ಹುಡುಗಿ ಮತ್ತು ಆಕೆಯ



ಶೂನ್ಯ

ತುಡಿತಗಳು. ಇಷ್ಟಲ್ಲದೆ ಸೂರ್ಯ ಮತ್ತು ನದಿಯ ಬಗೆಗೂ ಕವಿತೆಯಿದೆ. ಈ ಸಂಕಲನದ ಉತ್ತಮ ಕವಿತೆಯೆಂದರೆ "ಒಳಗೊಂದು ನದಿಯಿದೆ." ನಿನ್ನ ಒಳಗೊಂದು ನದಿಯಿದೆ ಎಂಬುದನ್ನು ಕಣ್ಣು, ಕಿವಿ, ಮೂಗು ನಾಲಗೆಗಳು ಬಣ್ಣ, ಶಬ್ದ, ವಾಸನೆ, ರುಚಿಗಳಿಂದ ಕವಯಿತ್ರಿ ಗುರಿತಿಸುತ್ತಾರೆ. ಕಣ್ಣು, ಕಿವಿ, ಇತ್ಯಾದಿಗಳು ಹೊತ್ತಿಕೊಂಡು ಉರಿಯುವುದರಿಂದ ನದಿಯೊಳಗೊಂದು ಬೆಂಕಿಯೂ ಇರುವುದು ಗಮನಕ್ಕೆ ಬರುತ್ತದೆ.

ನಾನು ತಿಳಿದಿದ್ದ ಬೆಂಕಿ
ನದಿಯೊಳಗೆ ಮಿಂದು
ನಂದಿ ಹೋಗಿದೆ.

—ಪದ್ಯದ ಕೊನೆಗೆ ಕವಯಿತ್ರಿ ಹೇಳುತ್ತಾರೆ. ಬೆಂಕಿಯನ್ನು ನಂದಿಸುವ ಶಕ್ತಿಯುಳ್ಳ ನದಿಯೊಳಗೇ ಬೆಂಕಿ ಇದೆಯೆಂದು ಗುರುತಿಸುವ ಕೆಲಸ ಗಮನಾರ್ಹವಾದದ್ದು. ಚಟುವಟಿಕೆಯ, ಕ್ರಿಯೆಯ ಕೇಂದ್ರವಾದ ಮನುಷ್ಯ ದೇಹದಲ್ಲಿ ಅರಿಷಡ್ವರ್ಗಗಳಿವೆ. ಅವು ಸಣ್ಣ ಕೆಂಡಗಳಾಗಿಯೇ ಇರುತ್ತವೆ.

"ನಾನು ಸೂರ್ಯ" ಕವಿತೆಯ ಕಲ್ಪನೆ ಶಾ ಬಾಲೂರಾಯರ "ಸೂರ್ಯ ಇವನೊಬ್ಬನೇ" ಕವಿತೆಗಳನ್ನು ನೆನಪಿಗೆ ತರುತ್ತವೆಯಾದರೂ ಇದೊಂದು ಪದ್ಯ ಅನಿಸುವುದಿಲ್ಲ. ಗದ್ಯದ ಸಾಲುಗಳನ್ನು ಕತ್ತರಿಸಿ ಇಟ್ಟಂತಿದೆ. ವಿಷಯವನ್ನು ಹೇಳುವ ರೀತಿ ನೀರಸವಾಗಿದೆ. ವಾಚ್ಯವಾಗಿದೆ. ಈ ಸಂಕಲನದ ಅನೇಕ ಕವಿತೆಗಳಲ್ಲಿ ಈ ಕೊರತೆ ಕಾಣುತ್ತದೆ. ಭರವಸೆ ಹುಟ್ಟಿಸಬಲ್ಲ ಕವಿತೆಗಳನ್ನು ಬರೆದಿರುವ ಸವಿತಾ ನಾಗಭೂಷಣ ಮುಂದೆ ಬರೆಯಲಿರುವ ಕವಿತೆಗಳನ್ನು ಕುತೂಹಲದಿಂದ ಕಾಯುತ್ತೇನೆ.

* * * * *

ನಾ ಬರುತ್ತೇನೆ ಕೇಳು—ಕವನಗಳು
ಸವಿತಾ ನಾಗಭೂಷಣ,
ಅಕ್ಷರ ಪ್ರಕಾಶನ,
ಹೆಗ್ಗೋಡು, ಸಾಗರ, ಕರ್ನಾಟಕ
ಪುಟಗಳು : ಐವತ್ತೆಂಟು
ಬೆಲೆ : ಹನ್ನೆರಡು ರೂಪಾಯಿಗಳು

●

# ಮೂಡಬಹುದು

ಮೂಡಲಾರದೆ ಹೋದ
ಹೊಸ ಬದುಕು
ಮರಹುಟ್ಟು ಪಡೆಯಲಾರದೆ
ಹೋದ ಆಸೆಗಳು

ಮನೆಯ ತುಂಬಾ
ಇಲಿ ಕೊರೆದ ಬಿಲಗಳು

ಒಣಗಿ ನಿಂತ ನನ್ನೂರ ಕೆರೆ
ಮಬ್ಬು ಕತ್ತಲೆಯೊಳಗೆ ಕುಳಿತು
ಹೊಸ ಬೆಳಕಿನ ನಿರೀಕ್ಷೆಯಲ್ಲಿ
ಕುಳಿತ ತಂಗಿ

ಅರೆ ಹೊಟ್ಟೆಯಲ್ಲಿ ಕಾಲ ತಳ್ಳುತ್ತ
ನಗುವನ್ನೇ ಮರೆತ ಅವ್ವ

ಮುಸ್ಸಂಜೆಯಲ್ಲಿ ಕುಳಿತು
ಕರಗಿ ಹೋದ ಕವಸುಗಳ
ನೆನೆದು ಹಳ ಹಳಿಸುವ ಅಪ್ಪ

ನೆರೆ ಹೊರೆಯವರೊಂದಿಗೆ
ಮೂಡಲಾರದೆ ಹೋದ ಬಾಂಧವ್ಯ

ಮುಗಿಲ ನೋಡುತ್ತ ಮಳೆಯ
ನಿರೀಕ್ಷೆಯಲ್ಲಿ ಕುಳಿತು
ನಿಟ್ಟುಸಿರು ಬಿಡುತ್ತಿರುವ ರೈತ

ನಾಲ್ಕು ದಶಕ ಕಳೆದರು
ಮೂಡಲಿಲ್ಲ ಆಕಾಶದಲ್ಲಿ
ಬಿಳಿ ಪಾರಿವಾಳಗಳು.

ಎಂ. ಶಿವಣ್ಣ, ಮನೆ ನಂ. 204, ಚಿಕ್ಕ ಅಂಗಡಿ ಬೀದಿ, ಟಿ. ನರಸೀಪುರ – 571 124

ಮೂಡಬಹುದು ಹೊಸ ಬದುಕು
ಮರುಹುಟ್ಟು ಪಡೆಯಬಹುದು
ಹೊಸ ಬದುಕು.

ತುಂಬಬಹುದು ನನ್ನೂರ ಕೆರೆ
ಮುಚ್ಚಬಹುದು ಇಲಿ ಕೊರೆದ
ಬಿಲಗಳನ್ನು ನಮ್ಮ ನಡುವೆ
ಹುಟ್ಟಿದ ಪುರುಷನೊಬ್ಬ

ಹೊಸಬೆಳಕು ಮೂಡಬಹುದು
ತಂಗಿಯ ಬಾಳಲ್ಲಿ

ಅರಳಬಹುದು ಅವ್ವನ
ಕೆನ್ನೆಗಳಲ್ಲಿ ನಗು.

ನಿಲ್ಲಬಹುದು ಅಪ್ಪನ ಹಳಹಳಿಕೆ
ಕುದುರಬಹುದು ನೆರೆಹೊರೆಯವರೊಂದಿಗೆ
ಹೊಸ ಬಾಂಧವ್ಯ.

ಮೂಡಬಹುದು ಆಗಸದಲ್ಲಿ
ಬಿಳಿ ಪಾರಿವಾಳಗಳು
ಬರುವ ದಿನಗಳಲ್ಲಿ.

—ಎಂ. ಶಿವಣ್ಣ

●

## ಸಿಸಿಫಸ್‌ನ ನಾಡು

ಉದಯಕ್ಕೆ ಮುನ್ನ ಅಗೋಚರ
ಹೊಂಚಿ ನುಗ್ಗಿದ ಬೆಳಕು
ತಬ್ಬಿ ಬ್ಬು ಗೊಳಿಸಿ ತಂಗಾಳಿ
ಪುಕ್ಕವನ್ನೆಬ್ಬಿಸಿ ನಿದ್ದೆ
ತಟ್ಟಿ ಹೋದಾಗಲೇ ಎಚ್ಚರ.
ಬಡಿಯುತ್ತಿದೆ ಅಪಾಯದ ಗಂಟೆ ಎದೆಯಲ್ಲಿ
ಎತ್ತ ಹೋಗಲಿ ಬಿಟ್ಟು ಗೂಡು ?

ಸ್ವಾಮಿನಾಥ, ಗೌನಿಪಲ್ಲಿ, ಶ್ರೀನಿವಾಸಪುರ, (ತಾ) ಕೋಲಾರ ಜಿಲ್ಲೆ–563135

ಇದೆಯೆಂದು ಸುಳಿ ಸಂಗಮದಲ್ಲಿ
ಸ್ನಾನ ಮಾಡಲಿಲ್ಲ
ಉಣ್ಣಲೇ ಇಲ್ಲ ಅಂದು
ವಿಷ ಬೆರಕೆಯೆಂದು
ಉಸಿರಾಡಲಿಲ್ಲ ಶ್ವಾಸಾ ಕೆಟ್ಟೀತೆಂದು
ಆದರಿಂದಲೇ ದೀರ್ಘ ಸಾಮಾಧಿಯ
ಪ್ರಜ್ಞಾಹೀನ ಶಿಶಿರ ನಿದ್ರೆ.

೦ ೦ ೦

ಇದು ಸಿಸಿಫಸ್‌ನ ನಾಡು
ಬರಲಾಗದು ಬಿಟ್ಟುಗೂಡು
ಬಯಲು ಬರಲ್ಲಾದೆ ನೆಂದ ಚಾಟಿ
ಮುನಿದ ಮಿಾಸಿಗಾಹಾರ
ಹಸಿರು ಪಾಚಿ.

೦ ೦ ೦

ಪಾಯಕ್ಕೆ ಬೆಟ್ಟದಡಿ ಕೋಡುತ್ತ ಮಣ್ಣು
ಯತ್ನವೆಲ್ಲ ವ್ಯರ್ಥ ಆತ್ಮವೆಬ್ಬಿಸಲು
ರಂಗೋಲಿಯಿದೆಯಿಲ್ಲಿ
ತಂತ್ರಾಂಗ ದೊಂದಂಗ
ದಿಗ್ಬಂಧನದ ಬಲೆಗೆ ಮುಗ್ಧ ಯುವಕ
ಪೊರೆ ಪೊರೆ ಮಣ್ಣು ಕೊರೆ
ಪರಂಪರೆಯ ಮರಿ,
ಕೆರೆಯುತ್ತಲೇ ಇದೆ
ಕೆರೆಯ ಕೆಳಗಿಂದ ಸುರಂಗ
ಇಳಿಸುತ್ತಲೇ ಇದೆ ಹನಿ ಹನಿ
ತನ್ನದಾಗಿಸಲು ರಣರಂಗ
ಹೊಳೆವ ಪ್ರತಿ ತರಂಗ

ಇದು ಸಿಸಿಫಸ್‌ನ ನಾಡು
ವಾಸನೆಗೆ ಎಲ್ಲೆಲ್ಲು ಸುಟ್ಟಬಾಡು

ಬೇರು ಬಿಟ್ಟಿದೆ ರಾಶಿ ಹೆಳದಿ ಪೈರು
ಜೀವಕೋಶದ ಪೊರೆಯು ಕಳಚಿ ನಿಂತು
ವಿಷ ಕನ್ಯೆ ಪ್ರಕೃತಿ ಕೀಟನಾಶಕ ತಿಂದು
ನಿಷ್ಕರುಣೆ ಗಗನಕ್ಕೆ ನಿತ್ಯ ನಮನ
ಸಲ್ಲಿಸಲು ಎಷ್ಟು ಉಳಿದೀತು ಹೆಣ ?
ಕಳೆದು ಜೀವ ಲಕ್ಷಣ, ಕಾಡಿ
ನಿಂದೆರಗುವ ಮಾರೀಚನ
'ಹಾ, ಲಕ್ಷ್ಮಣಾ ! ಹಾ, ಲಕ್ಷ್ಮಣ !'
ಆರ್ತ ಮೊರೆ, ಸಾವು ತಡೆಯಲು
ವ್ಯರ್ಥ ಸಮಾರಾಧನೆ.

ಂ ಂ ಂ ಂ

ಇಷ್ಟೇ ಅಲ್ಲ ಇದು ಸಿಸಿಫಸ್‌ನ ನಾಡು.
ಬಂಡೆಯುರುಳಿಸ ಬೇಕು ಮರಣ ತಪ್ಪಿದರೆ
ತಿಥಿ ವಿದಿಯ ಪಿಂಡಕ್ಕೆ ಅಂಗಲಾಚಿದರೆ
ಹಿಡಿಹಾಕಿ ಹಿಡಿವ ಕೈ ಝಾಡಿಸಲು ತ್ರಾಣಬೇಕು.

ಕಾಗೆಯೇನೋ ಸಿದ್ಧ
ಪಿಂಡ ಕೊಂಡೊಯ್ಯಲು
ಮಂತ್ರ ವಾಕ್ಯಗಳಿಗೆ
ಮಳೆ ಬೀಳಬೇಕಿಲ್ಲ.

ಇದು ಸಿಸಿಫಸ್‌ನ ನಾಡು
ಸುಟ್ಟರೂ ಬಾಡು
ತೆರಬೇಕು ಕಷ್ಟ ಫಲ
ಸಾವಿಗೂ ಇಲ್ಲಿ.
ಆದರೂ ಪ್ರಶ್ನೆ ಇದೆ,
'ಮುಟ್ಟಬಹುದೆ ಶಿಖರಾಗ್ರ ಬಂಡೆ ?'

—ಸ್ವಾಮಿನಾಥ

# ಸುದ್ದಿಯ ಗುದ್ದಾಟ

## ಶ್ರೀನಿವಾಸರಾಜು

ಬೆಂಗಳೂರಿನ ಹಾಗೂ ರಾಜ್ಯದ ಬಹುಪಾಲು ಸಾಹಿತ್ಯ ಪ್ರಿಯರಿಗೆ ಮೆಚ್ಚಿಗೆಯಾದವರು. ಸದಾ ಮೌನಿಯಾಗಿ ಹಸನ್ಮುಖಿಯಾಗಿ ಉತ್ತಮ ಸಾಹಿತ್ಯವನ್ನು ಬೆಳೆಸುವುದು ತಮ್ಮ ಧರ್ಮವೆಂದು ತಿಳಿದವರು. 'ರಾಜು' ಹೆಸರಿನಿಂದ ನಮಗೆ ಪ್ರಿಯರು. ನನಗಂತೂ ಎಷ್ಟೋ ವರ್ಷಗಳಿಂದ ಕಷ್ಟ ಸುಖಗಳನ್ನು ಹೇಳಿಕೊಳ್ಳಲು ಆತ್ಮೀಯ ವ್ಯಕ್ತಿ. ಮತ್ತೊಂದು ದೃಷ್ಟಿಯಿಂದ ಇವರ ಆತ್ಮವಾದ ರಾಘವೇಂದ್ರ ರಾವ್‌ರವರು ಸಹ. ಬಹಳ ದಿನಗಳ ನಂತರ ಸಿಕ್ಕಿದರೆ "ಎಷ್ಟು ದಿವಸವಾಯಿತು ತಿಂಡಿ ಕೊಡಿಸಿ ಸಾರ್" ಎಂದಾಗ ರಾಜು ನಗುತ್ತ "ನಡೀರಪ್ಪ ಅದಕ್ಯಾಕೆ ಯೋಚನೆ" ಎಂದು ಹೊಟ್ಟೆ ತುಂಬ ಕೊಡಿಸುವ ಮನಸ್ಸು.

ರಾಜು ಬರೆಯುವ ಮನಸ್ಸುಳ್ಳವರು–ಶಕ್ತಿಯುಳ್ಳವರು. ಆದರೆ ನಾನಾ ರೀತಿಯ ಚಟುವಟಿಕೆಗಳಲ್ಲಿ ತೊಡಗಿ ಸಾಹಿತ್ಯವನ್ನು ಬೆಳೆಸುವುದರಲ್ಲಿಯೇ ಬದುಕುತ್ತಿರುವವರು. ಇಷ್ಟಾದರೂ ಇವರ ಮೂಕ ನಾಟಕಗಳ ಸಂಕಲನ ಒಂದು ಉತ್ತಮ ಕೃತಿ. 'ಛಸ್‌ನಾಲ' ಕವನ ಸಂಕಲನದಲ್ಲಿ ಒಂದಷ್ಟು ಉತ್ತಮ ಕವನಗಳನ್ನು ನೋಡಬಹುದು. ಸಭ್ಯ ಹುಡುಗಿಯರಂತೆ ಸದಾ ನಾಚಿಕೆಯಿಂದ ಓಡಾಡಿಕೊಂಡಿರುವ ರಾಜುರವರು ಕ್ರೈಸ್ಟ್ ಕಾಲೇಜ್ ಕನ್ನಡ ಸಂಘಕ್ಕೆ ಸಾಂಸ್ಕೃತಿಕ ಜೀವವನ್ನು ಕೊಟ್ಟರು. ಎಚ್. ಎಸ್. ಶಿವಪ್ರಕಾಶ, ಚಂದ್ರಶೇಖರ, ಡಿ. ವಿ. ರಾಜಶೇಖರ್, ಪ್ರತಿಭಾ, ಎಸ್. ವಿ. ಭಾಗ್ಯಲಕ್ಷ್ಮಿ ಮುಂತಾದವರ ಕೃತಿಗಳನ್ನು ಪ್ರಕಟಿಸಿ ಬೆಳಕಿಗೆ ತಂದವರು. ಈಗ ಬರೆಯುತ್ತಿರುವ ಬಹುಪಾಲು ಸೃಜನಶೀಲ ಹುಡುಗ–ಹುಡುಗಿಯರು ಇಲ್ಲಿಯ ಸ್ಪರ್ಧೆಗಳಿಂದ ಗರಿಗೆದರಿದವರು.

ಕ್ರೈಸ್ಟ್ ಕಾಲೇಜ್ ಕನ್ನಡ ಸಂಘ ಐವತ್ತನೆಯ ಪ್ರಕಟಣೆಯನ್ನು ಹೊರತಂದಿದೆ. ಇಲ್ಲಿಯ ಪ್ರಕಟಣೆಗಳು ಮುಲಾಜಿಗೆ ಹೆರಿಗೆಯಾದವುಗಳಲ್ಲ. ಸಾಹಿತ್ಯದ ಸತ್ವವನ್ನುಳಿಸಿಕೊಂಡು ಬದುಕಬಲ್ಲಂಥವು. ಈಗ ನಮ್ಮಲ್ಲಿಯ ಹಿರಿಯ ಪ್ರಬಂಧಕಾರರಾದ ಎ. ಎನ್. ಮೂರ್ತಿರಾಯರ ಒಟ್ಟು ಪ್ರಬಂಧಗಳನ್ನು ಒಂದೆಡೆಸಿಗುವಂತೆ ಮುದ್ದಾಗಿ ತಂದಿದ್ದಾರೆ. ಇದಕ್ಕೆ ರಾಜುರವರನ್ನು ನಿಜವಾಗಿಯೂ ಅಭಿನಂದಿಸಲೇಬೇಕು, ಇವರ ಜೊತೆಯಲ್ಲಿ ಕೆಲಸ ಮಾಡುವ ಎಚ್. ಎಸ್. ರಾಘವೇಂದ್ರರಾವ್

ಮತ್ತು ಕೆ. ವಿ. ನಾರಾಯಣರವರ ಬಗ್ಗೆಯೂ ಮೆಚ್ಚಿಗೆಯ ಮಾತು ಸೇರಿಸಲೇಬೇಕಾಗುತ್ತದೆ. 'ಅಂಕಣ' ಸಾಹಿತ್ಯಕ ಪತ್ರಿಕೆ ಬರುತ್ತಿರುವುದು ಈ ರೀತಿಯ ಒಮ್ಮತದ ಮನಸ್ಸಿನಿಂದಲೇ ಅನ್ನಿಸುತ್ತದೆ.

ಶೂದ್ರದ ಕಷ್ಟದ ದಿನಗಳಲ್ಲಿ ಸಹಾಯ ಮಾಡಿದ, ಶೂದ್ರ ಸರಿಯಾಗಿ ಬರುವಂತೆ ನೋಡಿಕೊಂಡ ನನ್ನ ಪ್ರೀತಿಯ ಶ್ರೀನಿವಾಸರಾಜುರವರ ಬಗ್ಗೆ ಮತ್ತೇನು ಬರೆಯಲಿ ? ಎಂದಾದರೂ 'ಕನಸಿಗೊಂದು ಕಣ್ಣು'ವಿನಲ್ಲಿ ಬರೆಯುವಷ್ಟು ಸರಕಿರುವುದರಿಂದ ಸದ್ಯಕ್ಕೆ ನಾಲ್ಕು ಮೆಚ್ಚಿಗೆಯ ಮಾತನ್ನು ಬರೆಯಲು ಸಾಧ್ಯವಾಯಿತು. ಇದಕ್ಕಾಗಿ ರಾಜು ಸಿಕ್ಕಿದಾಗ ಸಂಕೋಚದಿಂದ ಮಾತಾಡದೆ ದೂರನಿಲ್ಲದಿರಲಿ ಎಂದು ಆಶಿಸುವೆ. ಹಾಗೆಯೇ ರಾಜುರವರ ಕನ್ನಡ ಸಂಘ ಬೇರೆ ಬೇರೆ ಶಾಲಾ ಕಾಲೇಜುಗಳಿಗೆ ಮಾರ್ಗ ದರ್ಶಿಯಾಗಲಿ

## ಅಂತರ

ಮಾತುಮಾತಿನ ನಡುವೆ ಸೋತು ಹೋಗುವ ಧ್ವನಿಯು
ನೂರುಗಾವುದದ ಹಿಂದಿಂದ ಬಂದ ಕೂಗು.
ಕೂಗು ಘರ್ಜನೆಗಳ ಗುಡುಗಾಟಗಳ ನಡುವೆ
ಬಿಕ್ಕುವ ಧ್ವನಿ ದಿಕ್ಕು ತೋರದೆ ತೊಳಲುತ್ತಿದೆ.
ಶತಮಾನಗಳಿಂದ ನಿಂತ ಶಿಲೆಗಳ ಮರೆಯಿಂದ
ಒಮ್ಮೊಮ್ಮೆ ಕೇಳುತಿದೆ ಸ್ಪಷ್ಟವಲ್ಲದ ಹಾಡು.

ಮಂತ್ರ ಘೋಷಣೆಗಳ ಆರಂಭಿಸಿದ ಧ್ವನಿಯು
ಬರಬರುತ್ತಾ ಸೀಳಿ ದ್ವಂದ್ವವಾಗಿ ಮಂತ್ರವು–ಘೋಷಣೆಯು
ಬೇರಾಗಿ, ಒಡೆದು, ಒಂದಕ್ಕೊಂದು ಪೈಪೋಟಿಯಾಗುತಿದೆ ;
ಧ್ವನಿ ಹೊರಡಿಸುವ ಬೇರು ಮಂತ್ರದಲ್ಲೂ ನಿಲ್ಲಲಾರದೆ,
ಘೋಷಣೆ ಎಡೆಗೂ ಬಾಗಲಾರದೆ ಪಟಗುಟ್ಟುವುದ ಕಾಣುತ್ತೇವೆ
ನಡು ನಡುವೆ ಸೋರುವ, ಜಾರುವ ಬಿಕ್ಕುಗಳಲ್ಲಿ.

---

ಮಮತಾ ಜಿ. ಸಾಗರ, ಪ್ರಥಮ ಎಂ. ಎ, ಕನ್ನಡ ವಿಭಾಗ, ಜ್ಞಾನಭಾರತಿ,
ಬೆಂಗಳೂರು-560056

ಆಳತೆ ಮೀರಿದ ಸಾಗರದ ಒಂದೊಂದು ಅಲೆಗಳೂ
ದಡದ ಗುಡಿಯ ಹೊಸ್ತಿಲಿಗೆ ಅಪ್ಪಳಿಸಿ,
ಮೆಟ್ಟಿಲುಗಳ ಇಳಿವ ಮುನ್ನವೇ ಮಾಯವಾಗುತ್ತಿವೆ.
ಪೂಜಾರಿಯ ವಿಭೂತಿಯಡಿಯಲ್ಲಿ ಭೂತದ ಹೆಜ್ಜೆಗಳ ಗುರುತು.
ಹುಟ್ಟು ಹಾಕುವ ಬೆಸ್ತನ ದೃಷ್ಟಿ ಕಣ್ಣೆಗೆಟುಕದ ಕಡಲ ತುದಿಗೆ.
ಭೂತ ಬೆಸ್ತನ ಬೆನ್ನಟ್ಟಿದಾಗ, ಅಲೆಗಳು ಬಲೆಗಳಾಗಿ,
ಬೆಸ್ತನೆ ಮೀನಾಗಿ, ಕಡಲ ತುದಿಯ ಮೇಲೆ ಮೊಗಚಿ
ಬಿದ್ದು ಒದ್ದಾಡುತ್ತಾನೆ.

ಸಾಗರದಾಳಕ್ಕೆ ಇಳಿದಷ್ಟೂ ಕಪ್ಪೆ ಚಿಪ್ಪುಗಳ ರಾಶಿ.
ರಾಶಿ ರಾಶಿ ಚಿಪ್ಪುಗಳೇ ಸಿಕ್ಕರೂ, ಒಂದಾದರು ಮುತ್ತು ದಕ್ಕಬಹುದು.
ಬಿರುಸು ಹುಟ್ಟುಗಳ ನಡುವೆ ತಪ್ಪಿಸಿಕೊಂಡ ಅಲೆಗಳಿಗಾಗಿ,
ಸಿಕ್ಕಬಹುದಾದ ಮುತ್ತುಗಳಿಗಾಗಿ,
ಕಾಯುತ್ತಿದ್ದಾಳೆ ದಡದಲ್ಲಿ ಮಿಂಚು ಕಂಗಳ ಮುಗ್ಧೆ.

ಅಲೆಯು ಸಿಕ್ಕಲು ಬಹುದು, ಮುತ್ತು ದಕ್ಕಲು ಬಹುದು ;
ಕಳಚಿಕೊಳ್ಳುವ ಬೇರು ಬಿಗಿದು ಊರಲು ಬಹುದು,
ಮಂತ್ರಗಳು ಮುಗಿದು ಘೋಷಗಳಡಗಿ ;
ಹೊಸ ಬದುಕು ಬರಬಹುದು.

ಈ ನೂರು 'ಬಹುದು'ಗಳ ನಡುವೆ
ಅಟ್ಟುವ ಪೂಜಾರಿಯಿಂದ ಹುಟ್ಟು ಹಾಕುತ್ತಿದ್ದಾನೆ ಬೆಸ್ತ ;
ಕಾಯುತ್ತಿದ್ದಾಳೆ ಮುಗ್ಧೆ –
ಶತಮಾನದ ಶಿಲೆಗಳ ಸೀಳಿ ಹೊರಬರಬಹುದಾದ
ಸ್ಪಷ್ಟ ಹಾಡಿಗಾಗಿ.

●

—ಮವಮ್ತಾ ಜಿ. ಸಾಗರ



# ಕೇಂದ್ರ ಸಾಹಿತ್ಯ ಅಕಾಡಮಿ ಕನ್ನಡ ಪ್ರಕಟಣೆಗಳು

ಹೊಸ ಪ್ರಕಟಣೆಗಳು : 1. ನಂಪಾದೀಪ (ತಮಿಳು ಕಾದಂಬರಿ) ವರದರಾಜನ್, ಅನು : ಶೇಷನಾರಾಯಣ ಪಿ. ಪಿ. viii+278, ಬೆಲೆ 30 ರೂ. 2) ಸಂಗವಿಜಯ (ತೆಲುಗು ಕಾದಂಬರಿ) ಉನ್ನವ ಲಕ್ಷ್ಮೀನಾರಾಯಣ (ಸಂಕ್ಷಿಪ್ತ) ಎಂ. ಕೋದಂಡರಾಮ ರೆಡ್ಡಿ ಕನ್ನಡ ಅನು : ಆರ್. ವಿ. ಎಸ್. ಸುಂದರಮ್, ಪಿ. ಪಿ. viii+350 ಬೆಲೆ 30 ರೂ. 3) ಸಮುದಾಯ ಬೀದಿ (ತಮಿಳು ಸಾಮಾಜಿಕ ಕಾದಂಬರಿ) ನಾ. ಪಾರ್ಥ ಸಾರತಿ, ಕನ್ನಡ ಅನು : ಟಿ. ಬಿ. ಸಿದ್ಧಲಿಂಗಯ್ಯ, ಪಿ.ಪಿ. iv—184, ಬೆಲೆ 20 ರೂ. 4) ಏಕಾಂಕ ಸಂಗ್ರಹ (ಕನ್ನಡ ಏಕಾಂಕ ನಾಟಕಗಳ ಎರಡನೆಯ ಸಂಗ್ರಹ) ಸಿಂದುವಳ್ಳಿ ಅನಂತಮೂರ್ತಿ ಪಿ. ಪಿ. iv+316 ಬೆಲೆ 25 ರೂ.

**ಭಾರತ ಸಾಹಿತ್ಯದ ನಿರ್ಮಾಣಕಾರರು** (ಪ್ರತಿಯೊಂದು ರೂ. 2–50) ಭಾಣಭಟ್ಟ–ಭಾರತೇಂದುಹರಿಶ್ಚಂದ್ರ–ಚಂದುಮೆನನ್–ಇಳಂಗೋ ಅಡಿಗಳ್–ಕಂಬನ್ ಕಾಜಿ ನಜರುಲ್ ಇಸ್ಲಾಮ್ – ಕೇಶವಸುತರು – ಕುಮಾರನ್ ಆಶಾನ್–ಲಕ್ಷ್ಮೀನಾಥ್ ಬೆಜಿ ಬರುವ–ಮಹರ್ಷಿ ದೇವೇಂದ್ರನಾಥಠಾಗೂರ್–ಮಾಣಿಕ್‌ವಾಚಕರ್–ನಮ್ಮಾಳ್ವರ್ ನಾನಲಾಲ್–ತೋರುದತ್–ವೀರೇಶಲಿಂಗಂ–ವಿದ್ಯಾಪತಿ.

ಪ್ರತಿಯೊಂದು ರೂ. 4–00

ಬಂಕಿಮಚಂದ್ರ ಚಟರ್ಜಿ–ಭಾರತಿ–ಭವಭೂತಿ–ದತ್ತಕವಿ–ಫಕೀರ್‌ಮೋಹನ್ ಸೇನಾಪತಿ ಗೋವರ್ಧನರಾಮ್–ಮಾಣಿಕ ವಂದ್ಯೋಪಾಧ್ಯಾಯ-ನರ್ಮದಾಶಂಕರ-ಪಂಜೆಮಂಗೇಶ ರಾವ್–ಪುರಂದರದಾಸರು–ಸರಳದಾಸ–ಸರೋಜಿನಿನಾಯಿಡು–ಶ್ರೀ ಅರವಿಂದರು.

ಪ್ರತಿಯೊಂದು ರೂ. 5–00

ಎ. ಆರ್. ರಾಜರಾಜವರ್ಮಾ–ಡಾ॥ ಸಿ.ಆರ್. ರೆಡ್ಡಿ–ಮಹಾಕವಿ–ಉಳ್ಳೂರ್–ಜ್ಞಾನ ದೇವ – ಮೇಘಾಣಿ–ವೇದಂ ವೆಂಕಟರಾಯಶಾಸ್ತ್ರಿ – ಕಬೀರ್ – ಗುರಜಾಡ–ತುಕಾರಾಂ ಬುದ್ಧದೇವಬೋಸ್–ರಾಹುಲ ಸಾಂಕೃತ್ಯಾಯನ.

**ಸಾಹಿತ್ಯ ಅಕಾದೆಮಿ :**

ಮುಂಬಯಿ–14 ನವದೆಹಲಿ–1 ಮದ್ರಾಸ್–18 ಕಲ್ಕತ್ತ–29

ದಕ್ಷಿಣ ಭಾರತ ಪ್ರಾದೇಶಿಕ ಕಛೇರಿ : 29, ಎಲ್ಡಮ್ ರಸ್ತೆ, ತೇನಂ ಪೇಟೆ, ಮದ್ರಾಸ್–600 018 ದೂರವಾಣಿ : 454080

ಕರ್ನಾಟಕ ಸರ್ಕಾರ

## ಇದು ನಿಮಗೆ ತಿಳಿದಿರಲಿ-ಜನನ ಮತ್ತು ಮರಣಗಳ ನೋಂದಣಿ ಕಾನೂನಿನ ಪ್ರಕಾರ ಕಡ್ಡಾಯ

**ನಿಮ್ಮ ಸಂಸಾರದಲ್ಲಿ ಆಗುವ, ಜನನ ಮತ್ತು ಮರಣ ಪ್ರಕರಣಗಳ ನೋಂದಾಣಿಯನ್ನು ಮಾಡಿಸಲೇಬೇಕು.**

1) ಗ್ರಾಮೀಣ ಪ್ರದೇಶದಲ್ಲಿ : ಗ್ರಾಮ ಲೆಕ್ಕಿಗರು, ಜನನ ಮರಣಗಳ ರಿಜಿಸ್ಟ್ರಾರರು.

2) ಮುನಿಸಿಪಾಲಿಟಿಗಳಲ್ಲಿ : ಆರೋಗ್ಯಾಧಿಕಾರಿಗಳು, ಜನನ ಮರಣಗಳ ರಿಜಿಸ್ಟ್ರಾರರು.

3) ಜನನವನ್ನು ಜನನದ ದಿನಾಂಕದಿಂದ 14 ದಿನಗಳೊಳಗೆ ನೋಂದಾಯಿಸಬೇಕು.

4) ಮರಣವನ್ನು ಮರಣದ ದಿನಾಂಕದಿಂದ 7 ದಿನಗಳೊಳಗೆ ನೋಂದಾಯಿಸಬೇಕು.

**ಈ ಕೆಳಗಿನ ಕೆಲವು ಕಾರಣಗಳಿಗಾಗಿ ಜನನ, ಮರಣಗಳ ಪ್ರಮಾಣ ಪತ್ರಗಳು ಅತಿ ಅವಶ್ಯಕ :**

1) ಶಾಲೆಗೆ ಪ್ರವೇಶ ಪಡೆಯಲು
2) ಉದ್ಯೋಗ ದೊರಕಿಸಿಕೊಳ್ಳಲು
3) ವಿವಾಹಕ್ಕೆ ಅರ್ಹತೆಯನ್ನು ಸಮರ್ಥಿಸಲು
4) ಮತ ಹಾಕುವ ಅರ್ಹತೆಯನ್ನು ಪಡೆಯಲು
5) ಡ್ರೈವಿಂಗ್ ಲೈಸನ್ಸ್ ಪಡೆಯಲು
6) ಪಾಸ್‌ಪೋರ್ಟ್ ಹೊಂದಲು
7) ಸಾಮಾಜಿಕ ರಕ್ಷಣೆಯ ಸವಲತ್ತು ಪಡೆಯಲು
8) ಮಿಲಿಟರಿಯಲ್ಲಿ ಸೇವೆ ಸಲ್ಲಿಸಲು
9) ವಿಮೆ ಮತ್ತು ನಿವೃತ್ತಿ ವೇತನ ಪಡೆಯಲು
10) ಆಸ್ತಿ ಹಕ್ಕನ್ನು ಹೊಂದಲು
11) ಮರಣದ ಕಾರಣ ತಿಳಿದುಕೊಂಡು ಚಿಕಿತ್ಸಾಕ್ರಮ ರೂಪಿಸಲು.

ಜನನ ಮರಣದ ದಾಖಲಾತಿ ಮಾಡಿಸುವುದು ಕರ್ತವ್ಯ ಹಾಗೂ ಸೇವೆ.
ಮಾಡಿಸದೇ ಇರುವುದು ಅಪರಾಧ–ಶಿಕ್ಷೆಗೆ ಒಳಗಾಗಬೇಕಾಗುತ್ತದೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ
ಜನನ, ಮರಣ ಮತ್ತು ಮದುವೆಗಳ
ಮುಖ್ಯ ರಿಜಿಸ್ಟ್ರಾರರು ಹಾಗೂ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ರಾಜ್ಯ, ಬೆಂಗಳೂರು.

ಕಾರ್ನಾಟಕ ವಾರ್ತೆ

## ವಿಮರ್ಶೆಗೆ ಬಂದ ಪುಸ್ತಕಗಳು ವಿಮರ್ಶೆಗೆ ಮುನ್ನ

**ತೋಳಗಳ ನಡುವೆ** (ಕಾದಂಬರಿ) ಬೆಸಗರಹಳ್ಳಿ ರಾಮಣ್ಣ, ಪುಸ್ತಕ ಚಿಲುಮೆ, ಮಂಡಿಮೊಹಲ್ಲ, ಮೈಸೂರು–570021, ಬೆಲೆ: 7 ರೂ.

ಬೆಸಗರಹಳ್ಳಿ ರಾಮಣ್ಣ ಈಗಾಗಲೇ ಕಥೆಗಾರರಾಗಿ ನಮ್ಮ ನಡುವೆ ಮುಖ್ಯರಾಗಿದ್ದಾರೆ. ಪ್ರಸ್ತುತ ಕಾದಂಬರಿಯನ್ನು ರಾಮಣ್ಣನವರ **ಕಥೆಗಳನ್ನು** ಓದುವಷ್ಟೇ ಗಂಭೀರವಾಗಿ ಮತ್ತು ರೋಚಕವಾಗಿ ಓದಿಕೊಳ್ಳಬಹುದು.

**ನಮ್ಮ ಕನಸುಗಳಲ್ಲಿ ನೀವಿದ್ದೀರಿ** (ಕಥೆಗಳು) ನೇಮಿಚಂದ್ರ, ಇತ್ತೀಚೆಗೆ ಹುಡುಗಿಯರಲ್ಲಿ ಚೆನ್ನಾಗಿ ಕಥೆ ಬರೆಯುತ್ತಿರುವವರಲ್ಲಿ ನೇಮಿಚಂದ್ರ ಸಹ ಒಬ್ಬರು. ಇಂಜಿನೀಯರ್ ಪದವೀಧರೆಯಾಗಿ, ಅತ್ಯಂತ ಪ್ರಮಾಣಿಕವಾಗಿ ಮತ್ತು ಕಳಕಳಿಯಿಂದ ಬರೆಯುತ್ತಿದ್ದಾರೆ. ಅತ್ಯಂತ ಭಾವನಾತ್ಮಕವಾಗಿ ಬರೆಯುವ ನೇಮಿಚಂದ್ರ ಸ್ವಲ್ಪ ದುಡಿಕಿದರೆ ಸಾಕು, ಜನಪ್ರಿಯ ಲೇಖಕಿಯರ ಗುಣಗಳನ್ನು ಪಡೆಯುವ ಸಾಧ್ಯತೆ ಇದೆ. ಆ ದಾರಿಯಲ್ಲಿ ಸಾಗದಂತೆ ನೇಮಿಚಂದ್ರರವರ ಪ್ರಗತಿಪರ ಚಟುವಟಿಕೆ ತಡೆಯಲಿ ಎಂದು ಆಶಿಸುವೆ.

**ಅಧೋಲೋಕದ ಬೆಳಕು** (ಕವನ ಸಂಕಲನ) ಸ್ವಾಮಿನಾಥ, ಶ್ರೀನಾಗ ಪ್ರಕಾಶನ, ಗೌನಿಪಲ್ಲಿ, ಶ್ರೀನಿವಾಸಪುರ (ತಾ) ಕೋಲಾರ ಜಿಲ್ಲೆ, ಬೆಲೆ: 9 ರೂ.

ತುಂಬ ಉತ್ಸಾಹದಿಂದ ಬರೆಯುತ್ತಿರುವ ಸ್ವಾಮಿನಾಥ ಉಡಾಫೆಯ ಕವಿಯಲ್ಲ. ಗಂಭೀರವಾಗಿ ಕಾವ್ಯ ರಚನೆಯಲ್ಲಿ ತೊಡಗಿರುವ ವ್ಯಕ್ತಿ, ತನ್ನೊಳಗಿರುವ ಒಂಟಿತನದ ಜೊತೆ ಸೇರಿಕೊಂಡು, ಬಿಡುಗಡೆಯಾಗಲು ಪ್ರಯತ್ನಿಸುತ್ತ ವಿಷಾದ ಎಳೆಗಳನ್ನು ಪದ್ಯದ ಸಾಲುಗಳಲ್ಲಿ ಬಿಡಿಸುತ್ತ ಕಾವ್ಯ ತನ್ನ ಪರಮೋದ್ದೇಶ ಎಂದು ತಿಳಿದಿರುವ ಸ್ವಾಮಿನಾಥ ಮತ್ತಷ್ಟು ಒಳ್ಳೆಯ ಕವನಗಳನ್ನು ಕೊಡಲಿ. ರಾಮಚಂದ್ರ ಶರ್ಮರ ಮುನ್ನುಡಿ ಕಾವ್ಯ ಕೃಷಿಗೆ ಪೂರಕವಾಗಿದೆ.

**ಮಳೆಯಲ್ಲಿ ನೆನೆದ ಮರಗಳು** (ಕಥೆಗಳು) ಎಂ. ಎಸ್. ವ್ಯಾಸರಾವ್ ಕೃತಿ ಪ್ರಕಾಶನ, ನಂ. 101, ಗಣೇಶ ಮಂದಿರ ರಸ್ತೆ, ಬೆಂಗಳೂರು–560028 ಬೆಲೆ: 12 ರೂ.

ಇದು ವ್ಯಾಸರಾವ್ ಕಥಾ ಸಂಕಲನ, ಕಾವ್ಯ ರಚನೆಯ ಜೊತೆಗೆ ಕಥೆಗಳಲ್ಲಿ ಕಾವ್ಯವನ್ನು ಸೃಷ್ಟಿಸುವ ಏಕಾಗ್ರತೆಯ ಪ್ರಯತ್ನ ಇಲ್ಲಿದೆ. ಈಗಾಗಲೇ ಪತ್ರಿಕೆಗಳಲ್ಲಿ ಪ್ರಕಟಗೊಂಡ ಕಥೆಗಳಿವು, ಮುನ್ನುಡಿಯಲ್ಲಿ ಶಾಂತಿನಾಥದೇಸಾಯಿಯವರು ಹೇಳಿರು

ವಂತೆ ವ್ಯಾಸರಾವ್ ಉತ್ತಮ ಕಥೆಗಳನ್ನು ಬರೆಯಬಲ್ಲಂಥವರು. ಈ ಸಂಕಲನದಲ್ಲಿ ಒಟ್ಟು ಒಂಬತ್ತು ಕಥೆಗಳಿವೆ. ಅಕ್ವೇರಿಯಂ, ಪತ್ತೆ ಮತ್ತು ಬ್ರೀಫಕೇಸ್ ಉತ್ತಮ ಕಥೆಗಳು.

**ಮಹಿಳೆಯ ಮುನ್ನಡೆ;** (ಲೇಖನಗಳು) ಸಂಪಾದಕರು : ಅಂದನೂರು ಶೋಭ, ಮತ್ತು ಶ್ರೀಲಕ್ಷ್ಮಿ, ಮಾನಿನಿ ಪ್ರಕಾಶನ, ನಂ. 15, ನಾಲ್ಕನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು–10, ಬೆಲೆ : 10 ರೂ.

ಮಹಿಳೆಯ ವಿವಿಧ ಮುಖಗಳನ್ನು ಅಂದರೆ ಅವಳ ಬದುಕಿನ ನಾನಾ ಕ್ಷೇತ್ರಗಳ ಹೋರಾಟದ ಸ್ವರೂಪವನ್ನು ಕುರಿತು ಬರೆಸಿರುವ ಲೇಖನಗಳು. ಕೆಲವು ಲೇಖನಗಳಲ್ಲಿ ಶಕ್ತಿ ಇದೆ. ಇನ್ನು ಕೆಲವು ಲೇಖನಗಳು ಅತ್ಯಂಶ ದುರ್ಬಲವಾಗಿವೆ. ಆದರೂ ಓದಬಹುದಾದ ಕೃತಿ. ವಿಜಾರಾ ಚಕ್ರವರ್ತಿ ಮತ್ತು ಶೋಭಾ ಮತ್ತಷ್ಟು ಶ್ರಮವಹಿಸಿದ್ದರೆ ಇನ್ನೂ ಉತ್ತಮ ಕೃತಿಯಾಗುತ್ತಿತ್ತು.

**ಭಗವದ್ಗೀತೆ ಅಪರಾಧ ಮತ್ತು ಶಿಕ್ಷೆ** (ವಿಚಾರ ಸಾಹಿತ್ಯ) ಆರ್.ಡಿ. ಹೆಗಡೆ, ಅಲ್ಮನೆ ಪ್ರಕಾಶನ, ಕಾನಗೋಡು, ಸಿರ್ಸಿ ಉ. ಕ. ಬೆಲೆ; 10 ರೂ.

ಆರ್.ಡಿ. ಹೆಗಡೆಯವರ ಒಂದು ಉತ್ತಮ ಅಧ್ಯಯನವನ್ನು ಈ ಕೃತಿಯಲ್ಲಿ ಕಾಣಬಹುದು. ಚರ್ಚೆಗೆ ಅನುವು ಮಾಡಿಕೊಡುವ ಕೃತಿ, ಇಂಥ ಉತ್ತಮ ಕೃತಿಯನ್ನು ಚೆನ್ನಾಗಿ ಪ್ರಕಟಿಸಿಲ್ಲವೆಂಬುದು ವ್ಯಥೆಯ ಸಂಗತಿ.

ರಾಹುಲ ಸಾಂಕೃತ್ಯಾಯನ್–ಪ್ರಭಾಕರ ಮಾಚ್ವೆ, ಬುದ್ಧದೇವ ಬೋಸ್–ಅಲೋಕ ರಂಜನ್ ದಾಸಗುಪ್ತ, ಕೇಂದ್ರ ಸಾಹಿತ್ಯ ಅಕಾಡಮಿ, ಬೆಲೆ : 5 ರೂ.

ಇಬ್ಬರು ಮಹಾನ್ ವ್ಯಕ್ತಿಗಳ ಬಗ್ಗೆ ರಚಿಸಿರುವ ಉತ್ತಮ ಕೃತಿಗಳು. ಕನ್ನಡಕ್ಕೆ ರಾಮಚಂದ್ರ ಶರ್ಮ ಮತ್ತು ಲಕ್ಷ್ಮಿನಾರಾಯಣ ಆರೋರ ತಂದಿದ್ದಾರೆ,

**—ಸಿದ್ಧಾರ್ಥ**

## ಒಂದು ಅಧ್ಯಯನ

**ಕಂಬಿಗಳ ಹಿಂದೆ ಕಂಬನಿ :** ಹೆಚ್. ಪಿ. ಫಿಲೋಮಿನಾ, ಕನಕ ಪ್ರಕಾಶನ, ಬೆಂಗಳೂರು–560009, ಬೆಲೆ 20 ರೂ.

ಫಿಲೋಮಿನರವರ ಮೇಲಿನ ಕೃತಿಯು ಮಾನವೀಯ ಸಂಬಂಧಗಳ ಸುತ್ತ ನೋಡಿರುವಂಥದ್ದು. ಮಹಿಳಾ ಖೈದಿಗಳನ್ನು ಸಂದರ್ಶಿಸಿ ಖೈದಿಗಳಾಗುವ ಹಿಂದಿನ ಬದುಕನ್ನು ಇಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಪುರುಷ ಪ್ರಧಾನವಾದ ಸಮಾಜದಲ್ಲಿ

ಮಹಿಳೆಯರ ಸುತ್ತ ರೂಪುಗೊಳ್ಳುವ ಘಟನೆಗಳನ್ನು ಲೇಖಕಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಇಷ್ಟಾದರೂ ಈ ಮುಗ್ಧೆಯರು ಬದುಕಿನಲ್ಲಿ ಆಸೆಗಳನ್ನು ಕಳೆದುಕೊಂಡವರು. ತಮ್ಮ ಮೃದು ಸ್ವಭಾವದಿಂದ ಶೋಷಣೆಗೆ ಒಳಗಾಗಿ ಯಾರಾದರೂ ಸ್ವಲ್ಪಮಟ್ಟಿನ ಕರುಣೆಯನ್ನು ತೋರಿಸಿದರೂ ಸಾಕು ಅವರಿಗಾಗಿ ಒಟ್ಟು ಜೀವನವನ್ನು ಮುಡುಪಾಗಿಡಲು ತುದಿಗಾಲಲ್ಲಿ ನಿಂತಿರುವ ಹೆಣ್ಣಿನ ಮನಸ್ಸನ್ನು ಕಂಬಿಗಳ ಹಿಂದಿನ ಕಂಬನಿಯಲ್ಲಿ ಕಾಣಬಹುದು. ಇದನ್ನೆಲ್ಲ ಚಿತ್ರಿಸುವಾಗ ಫಿಲೋಮಿನ ಸ್ವಲ್ಪಮಟ್ಟಿನ ಭಾವುಕತೆಗೆ ಬಲಿಯಾದರೂ; ಸರಳವಾದ ಭಾಷೆ ಭಾವುಕತೆಯನ್ನು ಮುಚ್ಚಿಟ್ಟು ವಾಸ್ತವತೆಗೆ ಕರೆದುಕೊಂಡು ಬರುತ್ತದೆ. ಉದಾ: "ಮುನ್ನೂರ ಇಪ್ಪತ್ತು ಚದುರ ಅಂಗಲದಲ್ಲಿ ನಿರ್ಮಿಸಿರುವ ಎರಡು ಸಾಲು ಕೋಣೆಗಳು ಮಾತ್ರವೇ ಇವರ ಪ್ರಪಂಚ. ಎತ್ತರದ ಗೋಡೆಯಾಚೆಯ ಜಗತ್ತಿನ ಅರಿವು ಇವರಿಗಿಲ್ಲ. ಹೊರ ಪ್ರಪಂಚದಿಂದ ಇವರನ್ನು ಬೇರ್ಪಡಿಸಿರುವ ಕಬ್ಬಿಣದ ಬಾಗಿಲನ್ನು ತೆರೆದಾಗ ಮುಚ್ಚಿದಾಗ ಹೊರಬರುವ ಕಠಿಣ ಶಬ್ದಗಳು ಮಾತ್ರ ಇವರ ಕರ್ಣಗಳನ್ನು ತಾಗುತ್ತವೆ."

ಮಹಿಳೆ ಈ ರೀತಿಯಲ್ಲಿ ಕಂಬಿಗಳ ನಡುವೆ ಬಂಧಿಯಾಗಿದ್ದರೆ, ಮತ್ತೊಂದು ಕಡೆ ಅದೇ ಮಹಿಳೆಯನ್ನು ನಾನಾ ರೀತಿಯ ಸಾಂಪ್ರದಾಯಿಕ ಸಂಬಂಧಗಳಿಂದ ಬಂಧಿ ಎಂಬುದರ ಬಗ್ಗೆ ಲೇಖಕಿ ನೋಡಲು ಹೋಗುವುದಿಲ್ಲ. ಕೇವಲ ತಾನು ನೋಡಿದ, ಮಾತಾಡಿಸಿದ ಮಹಿಳೆಯರ ದುಃಖ-ದುಮ್ಮಾನಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕೊನೆಗೆ ನ್ಯಾಯಾಲಯ ಎಂದೋ ಕೊಡುವ ತೀರ್ಪಿಗಾಗಿ ಕಾಯುವ ಮಾನಸಿಕವಾಗಿ ನರಳಿನರಳಿ ಸೊರಗಿಲಾಗುವ ಜನರೇ ಜಾಸ್ತಿ. ಬಹುಪಾಲು ಮಹಿಳೆಯರು ಉತ್ತಮ ಮನೆತನಗಳಿಂದ ಬಂದವರು. ಚೆನ್ನಾಗಿ ಬದುಕಬೇಕೆಂದು ಆಶಿಸಿದವರು. ಆದರೆ ಎದಿರು ನಿಲ್ಲುವ ಪರಿಸ್ಥಿತಿಗಳ ಸ್ವರೂಪಗಳು ನೂರಾರು. ಅದರಿಂದ ಉದ್ಭವಿಸುವ ಆಘಾತಗಳು ಎಷ್ಟೊಂದು?

ಫಿಲೋಮಿನ ಅವರು ವಸ್ತುಸ್ಥಿತಿಯನ್ನು ಹೇಳಿದ ನಂತರ ನಮ್ಮ ಜೈಲುಗಳು ಹೇಗಿರಬೇಕು ಎಂಬುದನ್ನು ಕುರಿತು ಒಂದಷ್ಟು ಸೂಚನೆಗಳನ್ನು ಕೊಟ್ಟಿದ್ದಾರೆ. ಸುಧಾರಣೆಯ ದೃಷ್ಟಿಯಿಂದ ಸೂಕ್ತವೆನ್ನಿಸಿದರೂ ಅವುಗಳನ್ನು ಕಾರ್ಯರೂಪಕ್ಕೆ ತರುವ ಉತ್ಸಾಹ ಮತ್ತು ಆಕಾಂಕ್ಷೆ ಮಾನವೀಯ ದೃಷ್ಟಿಯಿಂದ ಸರಕಾರಕ್ಕೆ ಮತ್ತು ಸಮಾಜಕ್ಕೆ ಇರಬೇಕಾಗುತ್ತದೆ. ಒಟ್ಟಿನಲ್ಲಿ 'ಕಂಬಿಗಳ ಹಿಂದೆ' ಬಂದು ನಿಲ್ಲಲು ತಮಗೆ ಗೊತ್ತಿಲ್ಲದೆ ನಾನಾ ರೀತಿಯ ತಪ್ಪುಗಳನ್ನು ಮಾಡಿ, (ತಪ್ಪುಗಳು ಎನ್ನುವುದಕ್ಕಿಂತ ಆಕಸ್ಮಿಕ ಘಟನೆಗಳು ಎನ್ನುವುದು ಸೂಕ್ತ) ಬಂದಿರುತ್ತಾರೆ. ಇವೆಲ್ಲವನ್ನು ದೃಷ್ಟಿಯಲ್ಲಿಟ್ಟುಕೊಂಡು ತಂದಿರುವ ಉತ್ತಮ ಕೃತಿ.

—ನಿರ್ಮಲಾರೆಡ್ಡಿ



# ಕನಸಿಗೊಂದು ಕಣ್ಣು

## ಅವನ ಸಾವು ಅಥವಾ ಆತ್ಮಹತ್ಯೆ

''Science tells us how to heal and how to kill; it reduces the death-rate in retail and then kills us wholesale in war; but only wisdom-desire co-ordinated in the light of all experience-can tell us when to heal and when to kill.

—**Will Durant**

ವಿಲ್‌ಡೂರೆಂಟ್‌ನ ಮೇಲಿನ ಮಾತು ನನ್ನ ಮನಸ್ಸಿನಲ್ಲಿ ಕೊರೆಯುತ್ತಿದ್ದುದು ಉತ್ತರ ಕನ್ನಡದ ಕಾಡಿನ ಸೊಬಗು–ಅದನ್ನು ಕಬಳಿಸಲು ತೋಳದ ರೀತಿಯಲ್ಲಿ ಕಾದಿರುವ ಯಂತ್ರಜ್ಞಾನ ಹಾಗೂ ಭ್ರಷ್ಟ ಕೈಗಳ ಬಗ್ಗೆ. ಆದರೆ ಅದನ್ನು ಬರೆಯಲು ಕೂತಾಗ ಮನಸ್ಸು ಒದ್ದಾಡ ತೊಡಗಿತ್ತು. ಯಾಕೆಂದರೆ ಕಳೆದ ಇಪ್ಪತ್ತು ವರ್ಷಗಳಿಂದ ನನ್ನ ಗೆಳೆಯನಾಗಿದ್ದವನೊಬ್ಬನ ಸಾವು ಆತ್ಮಹತ್ಯೆಯ ಮೂಲಕ ಕೊನೆಗೊಂಡಿತ್ತು. ಇಲ್ಲಿ ಸಾವು ಮತ್ತು ಆತ್ಮಹತ್ಯೆಯನ್ನು ವಿವರಿಸಲು ಬರೆಯುತ್ತಿಲ್ಲ.

ನಾಲ್ಕೈದು ದಿನಗಳ ಹಿಂದೆ ಅವನು ಕೆಲಸ ಮಾಡುತ್ತಿದ್ದ ಬ್ಯಾಂಕಿನ ಹತ್ತಿರ ಹೋದೆ. ಒಳಗೆ ನೋಡಿದೆ. ಅವನು ಕೂರುತ್ತಿದ್ದ ಮಾಮೂಲಿ ಜಾಗದಲ್ಲಿ ಇರಲಿಲ್ಲ. ಹೊರಗೆ ಕಾಫೀಗೆ ಹೋಗಿರಬಹುದೆಂದು ಬ್ಯಾಂಕಿನಿಂದ ಹೊರಗೆ ಬಂದು ಮತ್ತೆ ಹಿಂದಿರುಗಿ ನೋಡಿದೆ. ಅದೇ ಗೆಳೆಯ ಪರಿಚಯಿಸಿದ್ದ ಮತ್ತು ಶೂದ್ರಕ್ಕೆ ಚಂದಾದಾರನನ್ನಾಗಿ ಮಾಡಿದ್ದ ವ್ಯಕ್ತಿ ಸಿಕ್ಕಿದ. "ಅವನೆಲ್ಲಿ ಪತ್ತೇನೆ ಇಲ್ಲ. ಕಳೆದ ವಾರ ಬಂದಿದ್ದೆ, ಆಗಲೂ ಕಾಣಲಿಲ್ಲ" ಎಂದೆ. ಆತ ನನ್ನ ಮುಖವನ್ನೇ ನೋಡಿ "ಅವನು ಹೋಗಿ ಒಂದು ತಿಂಗಳಾಯಿತು" ಎಂದ. ನಾನು ನಗುತ್ತ ಎಲ್ಲಿಗೆ ಹೋದ? ಟ್ರಾನ್ಸ್‌ಫರ್ ಏನಾದರೂ ಆಯಿತಾ? ಅಥವಾ ಮತ್ತೆ ಅಮೇರಿಕೆ ಓಡಿಹೋದನಾ" ಎಂದೆ. "ಇಲ್ಲ ಸಾರ್, ಅವನು ಜನವರಿ ಇಪ್ಪತ್ತೈದರಂದು ತುಂಬ ಭೀಕರವಾಗಿ ಆತ್ಮಹತ್ಯೆ ಮಾಡಿಕೊಂಡ, ನೋಡುವುದಕ್ಕೆ ಭಯವಾಗುತ್ತಿತ್ತು" ಎಂದ. ಆಗ ಯಾಕೆ ಸತ್ತ? ಹೇಗೆ ಸತ್ತ? ಎಂಬ ನೂರಾರು ಪ್ರಶ್ನೆಗಳು ನನ್ನ ಮನಸ್ಸಿನ ಮುಂದೆ ಸುಳಿದವು.

ಅವನು ಅತ್ಯಂತ ಸೀದಾಸಾದಾ ಮನುಷ್ಯನಾಗಿದ್ದ. ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನದ ವಿದ್ಯಾರ್ಥಿಯಾಗಿದ್ದ. ಅವನಿಗಿಂತ ಒಂದೆರಡು ನಿಮಿಷ ಅಂತರದ ತಮ್ಮ

ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗಲೂ ಸೆಂಟ್ರಲ್ ಕಾಲೇಜಿಗೆ ಬಂದಾಗಲೆಲ್ಲ ತಬ್ಬಿಬ್ಬಾಗಿದ್ದೇನೆ. ಯಾಕೇದರೆ ಇಬ್ಬರಲ್ಲಿ ಅವನ್ಯಾರು-ಇವನ್ಯಾರು ಎಂದು. ಇಬ್ಬರೂ ಒಂದೇ ರೀತಿಯಲ್ಲಿದ್ದರು. ಇವರ ಮದುವೆಯ ದಿವಸವೂ ನನ್ನ ಹಾಗೆ ಬಹಳಷ್ಟು ಗೆಳೆಯರಿಗೆ ಸಮಸ್ಯೆಯಾಗಿದ್ದರು. ಈ ಸಮಸ್ಯೆಯಿಂದಲೇ ಒಬ್ಬ ವೈದ್ಯನಾಗಿ ಅಮೇರಿಕಾಗೆ ಹೊರಟು ಹೋದ. ಒಂದೆರಡು ತಿಂಗಳು ನನ್ನ ಗೆಳೆಯನೂ ಅಮೇರಿಕಾಗೆ ಹೋಗಿ ಬಂದ. ಹೋಗಿ ಬಂದಮೇಲೆ ಆಕ್ಸಿಡೆಂಟಾಗಿ ಸ್ವಲ್ಪ ಕಾಲಿನ ನೋವನ್ನು ಶಾಶ್ವತವಾಗಿ ಉಳಿಸಿಕೊಂಡ. ಮೊದಲಿನಂತೆ ನಡೆಯಲಾಗದೆ ನೋವನ್ನು ಅನುಭವಿಸುತ್ತಿದ್ದ. ಆದರೆ ಆ ನೋವು ಶಾಶ್ವತವಾಗದೆ ಸಾವನ್ನು ಶಾಶ್ವತವಾಗಿ ಅಪ್ಪಿಕೊಂಡಿದ್ದ. ಕೆಲಸವನ್ನು ಗೌರವಿಸುತ್ತಿದ್ದ. ಸಾಮಾನ್ಯವಾಗಿ ಬ್ಯಾಂಕಿನ ನೌಕರರು ಸರಿಯಾಗಿ ಕೆಲಸ ಮಾಡುವುದಿಲ್ಲ ವೆಂದು ನನ್ನ ಬ್ಯಾಂಕ್ ಗೆಳೆಯರ ಹತ್ತಿರ ತಮಾಷೆ ಮಾಡುತ್ತಿರುತ್ತೇನೆ. ಆದರೆ ಅವನು ಯಾವಾಗಲೂ ಕೆಲಸ ಮಾಡುತ್ತಿದ್ದ. ಬುದ್ಧಿವಂತನಾಗಿದ್ದ, ಕೆಲಸಬಾರದವನಾಗಿರಲಿಲ್ಲ. ಹಾಗಾದರೆ ಅವನ ಆತ್ಮಹತ್ಯೆಯ ಹಿನ್ನೆಲೆಯೇನು ? ಈಗ ಯಾರನ್ನು ಕೇಳುವುದು ? ಗೊತ್ತಾದರೂ ಅದರಿಂದ ಸಿಗುವ ಪರಿಹಾರವೇನು ಈ ರೀತಿಯ ತಳಮಳ ಅವನ ನೆನಪು ಬಂದಾಗಲೆಲ್ಲ ಮನಸ್ಸಿನಲ್ಲಿ ಮನೆಮಾಡಿಕೊಂಡಿರಬಹುದು.

ಅವನು 'ಶೂದ್ರ'ದ ಅಜೀವ ಸದಸ್ಯನಾಗಿದ್ದ. ಬಹಳ ದಿವಸಗಳಿಂದ ಬ್ಯಾಂಕಿನ ಕಡೆಗೆ ಹೋಗಿರಲಿಲ್ಲ. ಅಂದು 'ಕನಸಿಗೊಂದು ಕಣ್ಣು'ವಿನ ಎರಡನೆಯ ಭಾಗ 'ಖಾಸಗಿ ಲೇಖನಗಳು' ಪುಸ್ತಕವನ್ನು ಕೊಡಲು ಹೋಗಿದ್ದೆ. ಇದ್ದಿದ್ದರೆ "ಬಾರೋ" ಎಂದು ಹೋಟೆಲ್‌ಗೆ ಹೋಗಿ ಕಾಫೀ ಕೊಡಿಸಿ ಶೂದ್ರದ ಕಷ್ಟ ಸುಖಗಳನ್ನು ವಿಚಾರಿಸಿ ಕಳಿಸು ತ್ತಿದ್ದ. ಕೊನೆಗೆ ಮಾಮೂಲಿಯಂತೆ "ಮನೆಗೆ ಬಾರೋ ಅವಳು (ಹೆಂಡತಿ) ಎಷ್ಟು ದಿನಗಳಿಂದ ನಿನ್ನನ್ನು ಊಟಕ್ಕೆ ಕರೆದುಕೊಂಡು ಬರಲು ಹೇಳ್ತಿದ್ದಾಳೆ. ನೀನು ಬರ್ತೀನಿ ಎಂದು ಹೇಳಿ ಚಕ್ಕರ್ ಹೊಡೆಯುವುದರಲ್ಲಿ ನಿಸ್ಸೀಮ" ಎಂದು ಹೇಳುತ್ತಿದ್ದ. ಹಾಗೆ ನೋಡಿದರೆ ಮೂರು ನಾಲ್ಕು ಬಾರಿ ಮನೆಗೆ ಊಟಕ್ಕೆ ಬರ್ತೀನೆಂದು ಹೇಳಿ ತಪ್ಪಿಸಿಕೊಂಡಿದ್ದೆ. ಆಗ ಮನಸ್ಸಿನಲ್ಲಿಯೇ ಸ್ಟಾಕಿರುವ ಸುಳ್ಳನ್ನು ಹೇಳಿ ಬಚಾವಾಗು ತ್ತಿದ್ದೆ. ಆದರೆ ನಾನು ಚಕ್ಕರ್ ಹೊಡೆದಿದ್ದಕ್ಕೆ ಹೇಳುತ್ತಿದ್ದ ನೆಪ ಸುಳ್ಳೆಂಬುದು ಅವನಿಗೆ ಗೊತ್ತಾಗುತ್ತಿತ್ತು. ಅವನು ಪ್ರಮಾಣಿಕನಾಗಿದ್ದ, ಕ್ರಿಯಾಶಾಲಿಯಾಗಿದ್ದ. ಒಂದಷ್ಟು ದಿವಸ ರಂಗಭೂಮಿಯ ಚಟುವಟಿಕೆಯಲ್ಲಿ ಉತ್ಸಾಹದಿಂದ ಕೆಲಸ ಮಾಡಿದ. ಆದರೆ ಅಲ್ಲಿಯ ರಾಜಕೀಯದಿಂದ ಬೇಸತ್ತು ಹುಚ್ಚನಂತೆ ಕುಡಿಯುತ್ತಿದ್ದ. ಎಷ್ಟೋ ಬಾರಿ ಅವನ ಕುಡಿತನ್ನು ಕಡಿಮೆ ಮಾಡಿಸಲು ಪ್ರಯತ್ನಿಸಿದ್ದೆ. ಆದರೆ ಏನೂ ಪ್ರಯೋಜನ ವಾಗಲಿಲ್ಲ. ತುಂಬ ಸಿಗರೇಟು ಸೇದುತ್ತಿದ್ದ. ಯಾವುದನ್ನೂ ಕಡಿಮೆ ಮಾಡಲಿಲ್ಲ. ಇದ್ದಕ್ಕಿದಂತೆ ಐದಾರು ತಿಂಗಳು ಬಿಟ್ಟು ಒಮ್ಮೆ ಸಿಕ್ಕಿದಾಗ ಕಾಫೀಗೆ ಕರೆದುಕೊಂಡು ಹೋದ. ತಾನು ಮಾತ್ರ ತೆಗೆದುಕೊಳ್ಳಲಿಲ್ಲ. "ಯಾಕೋ !" ಎಂದು ಕೇಳಿದ್ದಕ್ಕೆ

"ಇಲ್ಲ ಕಣೋ ಕಾಫೀ, ಸಿಗರೇಟು, ಕುಡಿತ ಎಲ್ಲವನ್ನು ಬಿಟ್ಟು ನಾಲ್ಕೈದು ತಿಂಗಳಾಗಿದೆ" ಅಂದ. ನಿಜವಾಗಿಯೂ ನಂಬುವುದಕ್ಕೆ ಆಗಲಿಲ್ಲ. "ದಿನಾ ಯೋಗಾ ಕ್ಲಾಸ್‌ಗೆ ಹೋಗ್ತಿದ್ದೀನೋ, ನೋಡು ಎಷ್ಟೊಂದು ತೂಕ ಕಡಿಮೆ ಮಾಡಿಕೊಂಡಿದ್ದೀನಿ" ಎಂದು ಯೋಗದ ಪ್ರಯೋಜನದ ಬಗ್ಗೆ ಅದರಿಂದ ಹುಟ್ಟುವ ಕಾರ್ಯೋತ್ಸಾಹದ ಬಗ್ಗೆ ಭಾಷಣ ಬಿಗಿಯ ತೊಡಗಿದ್ದ. ಅವನು ಎಂದೂ ಬೋರ್ ಮಾಸ್ಟರ್ ಆಗಿರಲಿಲ್ಲ. ಸ್ವಾರಸ್ಯವಾಗಿ ಏನನ್ನೋ ಹೇಳುತ್ತಿದ್ದ. ಆದರೆ ಕಳೆದ ಆರು ತಿಂಗಳಲ್ಲಿ ಎರಡು ಬಾರಿ ಭೇಟಿಯಾದಾಗ ಮೊದಲಿನ ಉತ್ಸಾಹವಿರಲಿಲ್ಲ. ಒಂದು ರೀತಿಯ ವಿಷಾದವನ್ನು ತುಂಬಿಕೊಂಡು ಓಡಾಡುತ್ತಿದ್ದ. ಅದೊಂದು ದಿನ ಗೆಳೆಯನ ಸ್ಕೂಟರ್ ಹಿಂದೆ ಕೂತಿದ್ದ. ನಾನು ಹಡಪಡ್‌ರವರನ್ನು ನೋಡಲು ಕೆನ್ ಸ್ಕೂಲಿಗೆ ಹೋಗುತ್ತಿದ್ದೆ. ನನ್ನನ್ನು ನೋಡಿ, "ಏಯ್ ಇಲ್ಲೇ ಓಡಾಡ್ತ ಇರ್ತೀಯ ಮನೆಯ ಕಡೆ ಯಾಕೋ ಬರೋಲ್ಲ ?" ಎಂದ. "ಬರ್ತೀನಿ ಕಣೋ" ಎಂದೆ. "ಬಾರೋ" ಎಂದು ಹೊರಟು ಹೋದ. ನನ್ನ ಗಡಿಬಿಡಿಯ ಕೆಲಸಗಳಲ್ಲಿ ಹೋಗಲಿಲ್ಲ. ಆದರೆ ಅವನ ಸಾವನ್ನು ತಿಳಿದ ಮೇಲೆ ಮನೆಯನ್ನು ಹುಡುಕಿಕೊಂಡು ಹೋದೆ. ಮನೆಗೆ ಬೀಗ ಹಾಕಿತ್ತು. ಪಕ್ಕದ ಮನೆಯವರನ್ನು ಕೇಳಿದೆ. ಆಕೆ ಮಕ್ಕಳೊಡನೆ ಊರಿಗೆ ಹೋಗಿದ್ದಾಳೆ ಎಂದರು. ಹಿಂದಿರುಗಿದೆ. ಒಂದು ಕ್ಷಣ "ಅವನು ಭೀಕರವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡ" ಎಂಬ ಮಾತು ಬೆನ್ನ ಹಿಂದೆ ಕೂಗಿದಂತಾಯಿತು. ಮತ್ತೊಮ್ಮೆ ಭಯದಿಂದಲೇ ಹಿಂದಿರುಗಿ ನೋಡಿದೆ. ಅವನು ನಗುತ್ತ ನಿಂತಿದ್ದ. ಆ ನಗುವಿನ ಚಿತ್ರವನ್ನು ಬರೆದ ಕಲಾವಿದ ನನ್ನ ಮನಸ್ಸಾಗಿತ್ತು. ಅಥವಾ ನಾವು ಕಲ್ಪಿಸಿಕೊಳ್ಳುವ ಭಾವನೆಗಳಾಗಿದ್ದುವು. ಇಷ್ಟಾದರೂ ಅವನು ಯಾವ ರೀತಿಯಲ್ಲಿ 'ಆತ್ಮಹತ್ಯೆ'ಯನ್ನು ಮಾಡಿಕೊಂಡ ಎಂದು ಕೊಂಡಾಗ; ಚಾಕು-ಚೂರಿ-ವಿಷದ ಬಾಟಲ್-ನೇಣಿನ ಹಗ್ಗ - ಸೀಮೆಎಣ್ಣೆ - ಪೆಟ್ರೋಲ್ - ಎಲೆಕ್ಟ್ರಿಕ್‌ವೈರ್ ಇತ್ಯಾದಿ ಪರಿಕರಗಳು ಮನಸ್ಸಿನ ತುಂಬ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಕೊನೆಗೆ 'ಪ್ರೀತಿಯ ಗೆಳೆಯನಿಗೆ' ಎಂದು ಬರೆದಿದ್ದ ಪುಸ್ತಕ ಹಾಗೆಯೇ ಇತ್ತು. ಮತ್ತೆ ವಾಪಸ್ಸು ಹೋದೆ, ಕಿಟಕಿಯ ಬಾಗಿಲೊಂದು ತೆರೆದಿತ್ತು. ಪುಸ್ತಕವನ್ನು ಕಿಟಕಿಯೊಳಗೆ ಬಿಸಾಕಿದೆ. ಪುಸ್ತಕ ಬಿದ್ದ ಶಬ್ದಕ್ಕೆ ಏನೋ ಓಡಿದಂತಾಯಿತು. ಆದಕ್ಕೆ ಒಂದು ಕ್ಷಣ ಗಾಬರಿಗೊಂಡೆ. ಆದರೆ ಭೂತ-ಪಿಶಾಚಿ-ಪ್ರೇತಗಳ ಬಗ್ಗೆ ನಂಬಿಕೆ ಕಳೆದುಕೊಂಡು ಬಹಳ ವರ್ಷಗಳಾದ್ದರಿಂದ; ಆ ಕ್ಷಣ ಉದ್ಭವಿಸಿದ ಗಾಬರಿ ಭಯವಾಗಿ ಒಟ್ಟು ದೇಹವನ್ನು ಆವರಿಸಲಿಲ್ಲ. ಇಷ್ಟಾದರೂ ಅವನು ಅತ್ಯಂತ ಸಭ್ಯನಾಗಿದ್ದ. ಯಾಕೆಂದರೆ ಚಿಕ್ಕಂದಿನಲ್ಲಿ ನಾನು ಕೇಳಿದ್ದೆ: ಒಳ್ಳೆಯ ವ್ಯಕ್ತಿಗಳು ಸತ್ತ ನಂತರ ಭೂತ ಪ್ರೇತಗಳು ಆಗುವುದಿಲ್ಲ. ಕೇವಲ ದುಷ್ಟರು ಮಾತ್ರ ಹಾಗೆ ಅಲೆದಾಡುತ್ತಿರಲು ಸಾಧ್ಯ ಎಂದು!

●

29-2-88

ಶೂದ್ರ ಶ್ರೀನಿವಾಸ್

ಕರೆಯದೇ ಬಂದುದ, ಹೇಳದೇ ಹೋದುದನಾರು ಬಲ್ಲರು ? ಅಂದಂದಿಗೆ ಬಂದ ಪ್ರಾಣಿಗಳಾರೂ ಅರಿಯರಲ್ಲ ! ಬಂದ ಬಂದವರೆಲ್ಲ ಮಿಂದುಂಡು ಹೋದರು. ಗುಹೇಶ್ವರಲ್ಲಯ್ಯನುಣ್ಣದೆ ಹೋದುದನಾರೂ ಅರಿಯರಲ್ಲಾ.

—ಅಲ್ಲಮ ಪ್ರಭು

ಖಾಸಗಿ ಲೇಖನಗಳು

'ಕನಸಿಗೊಂದು ಕಣ್ಣು'ವಿನ ಎರಡನೆಯ ಭಾಗ

ಶೂದ್ರದ ಸದಸ್ಯರಿಗೆ : 10 ರೂ.
ಮೂಲ ಬೆಲೆ : 16 ರೂ.

REGD L/NP/KRNU/72 No. M(2) BPR 211/747/3

ಏಪ್ರಿಲ್ 1988ರ ಸಂಚಿಕೆಯಲ್ಲಿ :

ಬರಗೂರು ರಾಮಚಂದ್ರಪ್ಪ–ಎಚ್. ಎಸ್. ಭೀಮನಗೌಡರ್–ಅನುಪಮ ನಿರಂಜನ
ಎ. ಆರ್. ನಾಗಭೂಷಣ – ಸ. ಉಷಾ – ಪ್ರಭಾವತಿ – ಎಸ್. ಜಿ. ಸಿದ್ಧರಾಮಯ್ಯ
ಕುಮಾರಜೋಶಿ–ಕೃಷ್ಣಮೂರ್ತಿ ಆನೂರು-ಸವಿತಾ ನಾಗಭೂಷಣ-ವಿಜಯಸುಬ್ಬರಾಜ್
ಕನಸಿಗೊಂದು ಕಣ್ಣು–ಸುದ್ದಿಯ ಗುದ್ದಾಟ–ತಿರುಗಾಟದ ನಾಟಕಗಳು.



**M. SRINIVAS,** Editor and Publisher for SHUDRA
Printed at : **SYSTEM PRINTS, No. 10, 2nd Cross,**
**K. G. Road Extn, Bangalore - 9**